# ಅಚಲ

ತಿಂಗಳ ಪತ್ರಿಕೆ

ಮೇ - 2003

13

## ಒಳಗೇನಿದೆ






ಜಾಗೃತಿ ಮಹಿಳಾ ಅಧ್ಯಯನ ಕೇಂದ್ರ, ಬೆಂಗಳೂರು

# ಅಚಲ

ಸಂಪುಟ - 18 ಸಂಚಿಕೆ : 5

ಸಂಪಾದಕ ಮಂಡಲಿ
ಎನ್. ಗಾಯತ್ರಿ
ನೇಮಿಚಂದ್ರ, ದೇವಿ,
ಶಾಂತಾನಾಗರಾಜ್
ಹೆಚ್. ಎನ್: ಗೀತಾ
ಹೇಮಲತಾ ಮಹಿಷಿ

ಪ್ರಕಾಶಕರು
ಜಾಗೃತಿ ಮಹಿಳಾ ಅಧ್ಯಯನ ಕೇಂದ್ರ,
ಬೆಂಗಳೂರು


ಚಂದಾ ಹಣವನ್ನು ಚೆಕ್‌ನಲ್ಲಿ ಕಳುಹಿಸುವವರು ರೂ. 10 ಬ್ಯಾಂಕ್ ಕಮೀಷನ್ ಸೇರಿಸಿ ಕಳುಹಿಸಬೇಕು. ಎಂ. ಓ. ಫಾರ್ಮಿನ ಕೊನೆಯ ಭಾಗದಲ್ಲಿ ತಮ್ಮ ಹೆಸರು ವಿಳಾಸಗಳನ್ನು ಸ್ಪಷ್ಟವಾಗಿ ನಮೂದಿಸಬೇಕು. ಬದಲಾದ ವಿಳಾಸವನ್ನು ದಯವಿಟ್ಟು ಬರೆದು ತಿಳಿಸಿ.


**Achala - Edited by**
**Dr. N. Gayathri**

**Published by**
**Dr. G. Ramakrishna on behalf of Jagruthi Mahila Adhyayana Kendra**

**Printed at**
Lipi Mudrana
**Bangalore - 560 004**


**ಆತ್ಮೀಯರೆ,**

**ಕಳೆದ 18 ವರ್ಷಗಳಿಂದಲೂ ತಾವುಗಳು ಪ್ರೀತಿ, ಅಭಿಮಾನದಿಂದ ಅಚಲ ಪತ್ರಿಕೆಯನ್ನು ನಿಮ್ಮದಾಗಿಸಿಕೊಂಡು ಪೋಷಿಸುತ್ತಾ ಬಂದಿರುತ್ತೀರಿ. ಮಹಿಳಾ ಚಳುವಳಿಯ ಮತ್ತು ಸಂಶೋಧನೆಯ ಕ್ಷೇತ್ರದಲ್ಲಿ ಇನ್ನೂ ಬೆಟ್ಟದಷ್ಟು ಕೆಲಸವಾಗಬೇಕಿದೆ. ಈ ಮಹತ್ತರ ಕಾರ್ಯದಲ್ಲಿ ನಾವೆಲ್ಲರೂ ಒಟ್ಟಾಗಿ ಶ್ರಮಿಸಬೇಕಿದೆ. ನೀವೂ ಅಚಲ ಪತ್ರಿಕೆಯನ್ನು ನಿಮ್ಮ ವಿಚಾರಗಳ ವೇದಿಕೆಯನ್ನಾಗಿ ಮಾಡಿಕೊಳ್ಳಿ ಮತ್ತು ಪತ್ರಿಕೆಯ ಪ್ರಸಾರವನ್ನು ಹೆಚ್ಚಿಸುವಲ್ಲಿ ನೆರವಾಗಿ.**

ಯಾವುದೇ ವಿವರಗಳನ್ನು ಬರೆಯದ ಚಂದಾಹಣವು ಹಲವಾರು ಎಂ.ಓ ಗಳಲ್ಲಿ ನಮಗೆ ತಲುಪಿದೆ. ಚಂದಾದಾರರು ದಯವಿಟ್ಟು ಎಂ.ಓ ಫಾರ್ಮಿನ ಹಿಂಭಾಗದಲ್ಲಿ ವಿಳಾಸವನ್ನು ಬರೆಯಿರಿ.

ಅಚಲದ ಚಂದಾ ವಿವರಗಳು ಹೀಗಿವೆ

ವಾರ್ಷಿಕ ಚಂದಾ - ರೂ. 40/- (ವ್ಯಕ್ತಿಗಳಿಗೆ)
ರೂ. 75/- (ಸಂಸ್ಥೆಗಳಿಗೆ)
ಅಜೀವ ಚಂದಾ - ರೂ. 300/- (ವ್ಯಕ್ತಿಗಳಿಗೆ)
ರೂ. 400/- (ಸಂಸ್ಥೆಗಳಿಗೆ)


ಅಚಲ ವಿಳಾಸ

108, ಸ್ಕೈಲೈನ್ ಸುರಭಿ, 14-ಪಿ, ವಿದ್ಯಾಪೀಠ ರಸ್ತೆ,
ಬನಶಂಕರಿ 3ನೇ ಹಂತ, ಬೆಂಗಳೂರು - 560 085

## ಸಂಪಾದಕೀಯ

# ಮತ್ತೊಮ್ಮೆ ಮೀಸಲಾತಿಯೆಂಬ ಪ್ರಹಸನ

'ಮಹಿಳಾ ಮೀಸಲಾತಿ'ಯೆಂಬ ನಾಟಕದ ಪ್ರದರ್ಶನ ಲೋಕಸಭೆಯಲ್ಲಿ ಇತ್ತೀಚೆಗೆ ಮರುಪ್ರಸಾರವಾದದ್ದನ್ನು ನಾವೆಲ್ಲಾ ಮಾಧ್ಯಮಗಳಲ್ಲಿ ನೋಡಿದ್ದೇವೆ. ನಾಟಕವಾಡಿದ ನಟರಿಗೆ, ಸಂಯೋಜಿಸಿದ ಅಧಿಕಾರದ ಚುಕ್ಕಾಣಿ ಹಿಡಿದವರಿಗೆ ಯಾರಿಗೂ ಇದು ರಿಹರ್ಸಲ್ ಬೇಡದ ನಾಟಕವಾಗಿದೆ. ಹಾಗೆಯೇ ಈ ನಾಟಕವನ್ನು ವೀಕ್ಷಿಸುವ ಈ ದೇಶದ ಎಲ್ಲ ಪ್ರಜೆಗಳಿಗೂ ಇದು ಏನೂ ಸ್ವಾರಸ್ಯವಿರದ, ಅಂತ್ಯ ಮುಂಚೆಯೇ ತಿಳಿದರಬಹುದಾದದ್ದು ಆಗಿದೆ.

ಚುನಾವಣೆಗಳ ಸಂದರ್ಭದಲ್ಲಿ, ಮಹಿಳಾ ದಿನಾಚರಣೆಯ ಕಾರ್ಯಕ್ರಮಗಳಲ್ಲಿ ಮಹಿಳೆಯರ ಪರವಾಗಿ ಕೊಡಗಟ್ಟಲೆ ಕಾಳಜಿಯನ್ನು ತುಂಬಿತುಳುಕಿಸುವ ರಾಜಕೀಯ ಧುರೀಣರೆಲ್ಲ ಕ್ರಿಯೆಗೆ ಬಂದಾಗ ಏಕೆ ಮೌನವಾಗುತ್ತಾರೆ? ಎಂಬುದು ಮಹಿಳೆಯರಿಗೆ ಕಾಡುವ ಪ್ರಶ್ನೆ. ಮೌನ ಮುರಿದು ಮಹಿಳಾ ವಿರೋಧಿ ನಿಲುವು ತಳೆಯುವ ಸಮತಾ ಪಕ್ಷ ಮತ್ತು ಬಿ.ಎಸ್.ಪಿ.ಯಂತಹ ಉಗ್ರರಿಗೂ ನಮ್ಮಲ್ಲಿ ಬರವಿಲ್ಲ. ಮತ್ತೆ ಮತ್ತೆ ನಡೆಸುವ 'ಮೀಸಲಾತಿ' ನಾಟಕದ ಪ್ರದರ್ಶನದ ಸ್ಫೂರ್ತಿಯೇನು?

ಆಳುವ ಬಿಜೆಪಿ ಪಕ್ಷ ಮಹಿಳೆಯರ ಪರವಾಗಿ ತನ್ನ ಬೆಂಬಲವನ್ನು ಸೂಚಿಸಿ ಈ ಬಾರಿ ಸಂಸತ್ತಿನಲ್ಲಿ ಮಹಿಳಾ ಮೀಸಲಾತಿ ಮಸೂದೆಯನ್ನು ಜಾರಿಗೆ ತರುವಲ್ಲಿ ಪ್ರಯತ್ನಿಸುವುದಾಗಿ ಕಳೆದ ಕೆಲವು ತಿಂಗಳುಗಳಿಂದ ಪ್ರಚಾರ ಮಾಡುತ್ತಲೇ ಬಂದಿದೆ. ಆದರೆ ಆಳುವ ಪಕ್ಷಕ್ಕೆ ಇಂತಹ ಮಸೂದೆಯ ಜಾರಿಯ ಬಗ್ಗೆ ಇರಬೇಕಾದ ರಾಜಕೀಯ ಸಂಕಲ್ಪವೇ ಇಲ್ಲ ಎಂಬುದನ್ನು ಈ ಬಾರಿಯಂತೂ ಸ್ಪಷ್ಟಪಡಿಸಿದೆ. ಮಸೂದೆ ಚರ್ಚೆಗೆ ಮಂಡಿತವಾಗದ್ದಕ್ಕೆ ಅವರು ಏನೇ ಕಾರಣ ಕೊಟ್ಟರೂ ಅದು 'ನೆಪ' ಎಂಬುದನ್ನು ಅರಿಯದಷ್ಟು ಭಾರತೀಯ ಮಹಿಳಾ ಸಮುದಾಯ ಮುಗ್ಧರಲ್ಲ. ಈಗ ಮಸೂದೆ ಚರ್ಚೆಗೂ ಬರದಂತೆ ಅಡ್ಡಿ ಪಡಿಸುತ್ತಿರುವ ಶಕ್ತಿಗಳ ಎರಡು ಮುಖ್ಯ ನಿಲುವು ಮೊದಲನೆಯದಾಗಿ ಸರ್ವಪಕ್ಷಗಳ ಸಮ್ಮತಿಯಿಲ್ಲದಿರುವುದು. ಮತ್ತೊಂದು ಮಹಿಳಾ ಮೀಸಲಾತಿಯೊಳಗೊಂದು ಒಳ ಜಾತಿಯ ಮೀಸಲಾತಿ ಬೇಕೆಂಬುದು. ಈ ಎರಡೂ ಕಾರಣಗಳು ನಿಜವಾದ ಕಾರಣಗಳಾಗದೆ ನೆಪವಾಗಿದೆಯೆಂಬುದನ್ನು ಈ ದೇಶದ ರಾಜಕೀಯ ಬೆಳವಣಿಗೆಯನ್ನು ಬಲ್ಲ ಯಾರಾದರೂ ತಿಳಿಯಬಹುದು. ಲೋಕಸಭೆಯಲ್ಲಿ ಚರ್ಚಿತವಾಗುವ ಎಲ್ಲ ವಿಷಯಗಳಿಗೂ ಸರ್ವಪಕ್ಷಗಳ ಸಮ್ಮತಿಯಿರುತ್ತದೆಯೇ? ತಮಗೆ ಬೇಕೆನಿಸಿದ ವಿಷಯಗಳಿಗೆ ಸರ್ವಪಕ್ಷಗಳ ಸಮ್ಮತಿಯಿಲ್ಲದಿದ್ದರೂ ಮತಹಾಕಿಸಿಕೊಂಡು ತಮಗೆ ಬೇಕಾದ್ದನ್ನು ಮಾಡಿಕೊಳ್ಳುವ ಬಿಜೆಪಿಗೆ 'ಸರ್ವಪಕ್ಷಗಳ ಸಮ್ಮತಿ'ಯ ನಾಟಕ ಈಗ ಅಗತ್ಯವಾಗಿದೆ. ಬಿಜೆಪಿಯ ಸದಸ್ಯರಲ್ಲೇ ಇದಕ್ಕೆ ಸಮ್ಮತಿಯಿಲ್ಲದಿರುವಾಗ ಆಳುವ ಪಕ್ಷಕ್ಕೆ ಏನಾದರೂ ಕುಂಟು ನೆಪಬೇಕು. ಅಲ್ಲದೆ, ಈಗ ಚುನಾವಣೆಗಳು ಬರುವ ಹಿನ್ನೆಲೆಯಲ್ಲಿ ಯಾವ ರಾಜಕೀಯ ಪಕ್ಷವೂ ಈ ಕಾರಣಕ್ಕಾಗಿ ತಮ್ಮಲ್ಲಿ ಒಡುಕುಂಟು ಮಾಡಿಕೊಳ್ಳಲು ಸಿದ್ಧರಿಲ್ಲ.

ಇನ್ನು ಒಳಮೀಸಲಾತಿಯನ್ನು ಕೇಳುತ್ತಿರುವ ಲೋಹಿಯಾವಾದಿಗಳಾದ ಸಮತಾಪಕ್ಷ ಬಿ.ಎಸ್.ಪಿ. ಶಿವಸೇನೆ ಪಕ್ಷಗಳೂ ಕೂಡ ಮಹಿಳಾಪರವಾದಿಗಳೆಂದು ನಂಬುವಂತಿಲ್ಲ. ಮೂರು ದಶಕಗಳಿಗೂ ಹೆಚ್ಚು ಕಾಲದ ದಲಿತ ಚಳುವಳಿಯಲ್ಲಿ ಮಹಿಳಾ ನಾಯಕರು ರೂಪುಗೊಂಡಿಲ್ಲ. ಅಧಿಕಾರದ ರುಚಿಕಂಡ ಮೇಲ್ವರ್ಗದ ಕೆಳಜಾತಿ ಜನರು ತಮ್ಮ ಮಹಿಳೆಯರನ್ನು ಸಂಘಟಿಸುವತ್ತ ಪ್ರಯತ್ನ ಮಾಡುವಲ್ಲಿ ಸಂಪೂರ್ಣ ಸೋತಿವೆ. ಒಳ ಮೀಸಲಾತಿ ನೀಡಿದಾಗಲೂ ದೇಶದ ರಾಜಕೀಯದಲ್ಲಿ ಮೂಡಿ ಬರುವುದು ರಾಬ್ರಿದೇವಿ, ಮಾಯಾವತಿಯಂತಹವರೇ. ಇಂತಹವರಿಂದ ಯಾವ ಮಹಿಳಾ ಸಮುದಾಯದ ಬೆಳವಣಿಗೆಗೂ ಅನುಕೂಲವಾಗುವುದಿಲ್ಲ.

ಮಹಿಳಾ ಮೀಸಲಾತಿಯಿರಲಿ, ಯಾವುದೇ ಮೀಸಲಾತಿ ಅರ್ಥಪೂರ್ಣವಾಗಬೇಕಾದರೆ ಸಾಮೂಹಿಕ ಜನಚಳುವಳಿಯಿಂದ ನಾಯಕರು ಮೂಡಿಬರಬೇಕು. ಇಲ್ಲದಿದ್ದರೆ ಅಧಿಕಾರದಲ್ಲಿರುವ ಅಪ್ಪ, ಗಂಡ ಮತ್ತು ಮಗನ ಸಂಬಂಧಿಗಳಾಗಿ ಮಾತ್ರ ಮಹಿಳೆಯರು ಅಧಿಕಾರದ ಗದ್ದುಗೆಗೇರಿದಂತಾಗುತ್ತದೆ. ಈ ದುರಂತ ಮಹಿಳಾ ಮೀಸಲಾತಿಗೆ ಮಾತ್ರ ಅನ್ವಯಿಸಿದ್ದಲ್ಲ. ಮಹಿಳಾ ಮೀಸಲಾತಿಗಾಗಿ ಹೋರಾಟ ನಡೆಸುತ್ತಿರುವ ಮಹಿಳೆಯರು ಜೊತೆ ಜೊತೆಯಲ್ಲಿಯೇ ಇನ್ನೂ ವ್ಯಾಪಕವಾಗಿ ಸಾಮೂಹಿಕ ಚಳುವಳಿಗಳಲ್ಲಿ ಭಾಗವಹಿಸುವುದರ ಮೂಲಕ ಅಧಿಕಾರದ ವಿವಿಧ ನೆಲೆಗಳನ್ನು ಗಳಿಸಿಕೊಳ್ಳುವ ಪ್ರಯತ್ನ ಮಾಡಬೇಕು. ಇಲ್ಲದಿದ್ದರೆ ಈ 'ಮೀಸಲಾತಿಯ ಪ್ರಹಸನ'ದ ನೂರು ಪ್ರದರ್ಶನಗಳಾದರೂ ಮಹಿಳೆಯರು ಇದ್ದಲ್ಲಿಯೇ ಇರುತ್ತಾರೆ.

**- ಎಸ್. ಗಾಯಿತ್ರಿ**

# ಭಾರತೀಯ ಭಕ್ತಿಪಂಥ ಮತ್ತು ಮಹಿಳೆಯರು

- *ಬಿ. ಗಂಗಾಧರ ಮೂರ್ತಿ*

''ಯತ್ರ ಪೂಜ್ಯಂತೇ ನಾರಿ ರಮತೇ ತತ್ರ ದೇವಾಃ'' ಎಂಬ ಅಗತ್ಯಕ್ಕಿಂತಲೂ ಹೆಚ್ಚು ಉತ್ಸಾಹದಿಂದ ಉದ್ಧರಿಸಲಾಗುವ ಹೇಳಿಕೆ ಮಹಿಳೆಯ ಸಾಮಾಜಿಕ ಸ್ಥಾನಮಾನವನ್ನು ಕುರಿತ ಚರ್ಚೆಯಲ್ಲಿ ತಪ್ಪದೆ ತಲೆಹಾಕುತ್ತದೆ. ಈ ಹೇಳಿಕೆಯು ಸನಾತನ ಧರ್ಮದ ಪುನರುಜ್ಜೀವನಕ್ಕಾಗಿ ಹಂಬಲಿಸುವವರ ಅಪರಾಧಿ ಮನೋಭೂಮಿಕೆಯ ಅಭಿವ್ಯಕ್ತಿಯಾಗಿರಬೇಕೆಂಬ ಸಂದೇಹ ನನಗಿದೆ. ಮಹಿಳೆಗೆ ಇಂತಹ ಅತಿ ಗೌರವದ ಸಾಮಾಜಿಕ ಸ್ಥಾನಮಾನಗಳನ್ನು ನಮ್ಮ ಪ್ರಾಚೀನ ಹಿಂದೂ ಸಮಾಜ ಕಲ್ಪಿಸಿತ್ತು ಎಂಬುದು ಕಾಲ್ಪನಿಕವೋ, ವಾಸ್ತವವೋ ತಿಳಿಯದು. ಆದರೆ ನಾವು ಬದುಕುತ್ತಿರುವ ಆಧುನಿಕ ಸಮಾಜದಲ್ಲಿ ಮಹಿಳೆಯ ಸ್ಥಾನಮಾನಕ್ಕೆ ಸಂಬಂಧಿಸಿದ ದೃಷ್ಟಿಕೋನ ಹೀಗಿದೆ : ''ದೇವರು ಪುರುಷ ಹಾಗೂ ಮಹಿಳೆಯನ್ನು ಸಮಾನವಾಗಿ ಸೃಷ್ಟಿಸಿಲ್ಲ; ಮಹಿಳೆಯರು ಪುರುಷರೊಂದಿಗೆ ಸ್ಪರ್ಧಿಸುವುದರ ಬಗ್ಗೆ ಯೋಚಿಸುವುದನ್ನು ನಿಲ್ಲಿಸಿ ಮನೆಗೆ ಮರಳಬೇಕು.'' ಈ ಅಭಿಪ್ರಾಯವನ್ನು ವ್ಯಕ್ತಪಡಿಸಿದವರು ಸರ್ವೋಚ್ಚ ನ್ಯಾಯಾಲಯದ ಶ್ರೇಷ್ಠ ನ್ಯಾಯಾಧೀಶರಾಗಿದ್ದ (ಈಗ ಮಾನವ ಹಕ್ಕುಗಳ ಆಯೋಗದ ಅಧ್ಯಕ್ಷರು) ಶ್ರೀ ರಂಗನಾಥ ಮಿಶ್ರರು (ನವೆಂಬರ್ 90) ಇಪ್ಪತ್ತನೇ ಶತಮಾನದ ಕೊನೇ ಪಾದದಲ್ಲಿರುವ ಭಾರತೀಯ ನ್ಯಾಯಾಂಗದ ಅತ್ಯುನ್ನತ ಪೀಠವನ್ನು 'ಅಲಂಕರಿಸಿದ್ದ' ಜಸ್ಟಿಸ್ ಮಿಶ್ರರಿಗೆ ಈ ಅಭಿಪ್ರಾಯವಿದ್ದರೆ ಪ್ರಾಚೀನ ಭಾರತದಲ್ಲಿ ಅವಳ ಸ್ಥಾನಮಾನವನ್ನು ಹೇಗಿದ್ದಿರಬಹುದೆಂದು ಊಹಿಸಲು ಘನಪಾಠಿ ಪಂಡಿತರೇನೂ ಬೇಕಿಲ್ಲ.

ಚಾತುರ್ವರ್ಣ್ಯವಾಗಿ ಆರ್ಯರ ಆಗಮನದ ನಂತರ ವಿಸ್ತೃತಗೊಂಡ ವ್ಯವಸ್ಥೆಯ ಮೂಲದಲ್ಲಿ ಎರಡು ವರ್ಣಗಳ ವ್ಯವಸ್ಥೆಯಾಗಿದ್ದುದರ ಆಧಾರಗಳು ಋಗ್ವೇದದಲ್ಲೇ ಕಂಡುಬರುತ್ತದೆ. ಹೆಣ್ಣು - ಗಂಡುಗಳ ಲಿಂಗ ಭೇದದ ಸಾಮಾಜಿಕ ಪಾತ್ರವು ನಿಖರಗೊಳ್ಳಲು ನಡೆದ ಸುದೀರ್ಘ ಸಂಘರ್ಷದ ಈ ಸಂಕ್ರಮಣ ಕಾಲವನ್ನು ಭಾರತೀಯ ಇತಿಹಾಸದ ಮೊದಲ ಸಾಮಾಜಿಕ ಕ್ರಾಂತಿ ಎನ್ನುವವರೂ ಇದ್ದಾರೆ. ಪ್ರಾರಂಭಿಕ ಕಾಲದ ಹೆಣ್ಣು - ಗಂಡುಗಳೆಂಬ (ಕ್ಷತ್ರ - ಬ್ರಹ್ಮನ್ ಎಂದು ಗುರುತಿಸಲಾಗಿರುವ) ದ್ವಿವರ್ಣ ವ್ಯವಸ್ಥೆಯ ಸಂದರ್ಭದ ಈ ಸಾಮಾಜಿಕ ಬದಲಾವಣೆಯು ಭಾರತೀಯ ಸಮಾಜದ ಉತ್ಪಾದನಾ ಕ್ಷೇತ್ರದಲ್ಲಿ ಪುರುಷನ ಪ್ರಧಾನತೆಯನ್ನು ಸ್ಥಾಪಿಸಿದ ಕಾಲಾವಧಿಗೆ ಸೇರಿದ್ದು. ಗಂಗಾತೀರದ ನಾಗರಿಕತೆಯಲ್ಲಿ ಮಹಿಳೆ ಭೂಮಿಯನ್ನು ಕೃಷಿಗಾಗಿ ಉಳುಮೆ ಮಾಡುವ ಪದ್ಧತಿಯು ವ್ಯಾಪಕವಾಗಿ ಜಾರಿಯಲ್ಲಿತ್ತು. ಈ ಪದ್ಧತಿಯನ್ನು ಮೂಲದ ಸ್ಮೃತಿಯಾಗಿ ವಿಧಿಕ್ರಿಯೆಯ ರೂಪದಲ್ಲಿ ಇಂದಿಗೂ ಉಳಿಸಿಕೊಳ್ಳಲಾಗಿದೆ. ಭೋಜಪುರಿ ಜಾನಪದ ಪರಂಪರೆಯ ಹಾರ್ ಫಾರ್ಮರಿ ಗೀತೆಗಳಲ್ಲಿ ಹಳ್ಳಿಯ ಪ್ರಾಯದ ಹೆಣ್ಣುಗಳು ಮಳೆಗಾಗಿ ನಡುರಾತ್ರಿಯಲ್ಲಿ ಬೆತ್ತಲೆಯಾಗಿ ಉಳುಮೆ ಮಾಡುವ ಚಿತ್ರಣವಿದೆ. ಇಂತಹ ವಿಧಿಕ್ರಿಯೆಯಲ್ಲಿ ಜನಕಮಹಾರಾಜನ ಮಡದಿ ಸೋಂಧಾಲಿಯಾ ಕೂಡಾ ಭಾಗವಹಿಸಿದ ಪ್ರಸ್ತಾಪ ಬರುತ್ತೆ. ಉತ್ಪಾದ್ಯ ವ್ಯವಸ್ಥೆಯಲ್ಲಿ ಪಾತ್ರವಹಿಸುತ್ತಿದ್ದ ಮಹಿಳೆಯ ಸಾಮಾಜಿಕ ಸ್ಥಾನಪಲ್ಲಟಗೊಳಿಸಿ ಕ್ರಮೇಣ ಉಳುಮೆಗಾಗಿ ನೇಗಿಲನ್ನು ಬಳಸಲು ತೊಡಗಿದ ಪುರುಷ-ಪರ ವ್ಯವಸ್ಥೆಯತ್ತ ಸಮಾಜವು ಹೊರಳತೊಡಗಿದ್ದು ಆಗಲೇ. ನೇಗಿಲು ಆಗಿನ ಕಾಲದ ಪುರುಷ ಪ್ರಧಾನ ಸಮಾಜದ ಸಂಕೇತವಾದದ್ದು ಹೀಗೆ.

ಅಭಿಜಾತ ಸಮಾಜವೆಂದು ಕರೆಯಲಾಗುವ ಇತಿಹಾಸದ ಕಾಲಘಟ್ಟದಲ್ಲಿ ಜೀತದಾಳುಗಳಿಗೆ ಮತ್ತು ಮಹಿಳೆಯರಿಗೆ ಸಮಾನತೆಯನ್ನು ನೀಡಲಾಗದ ಸಾಮಾಜಿಕ ಪರಿಮಿತಿಗಳು ಇದ್ದವೆಂಬುದರಲ್ಲಿ ವಿಶೇಷತೆಯೇನೂ ಇಲ್ಲ. ಈ ಅಭಿಜಾತ ಯುಗವೆಂಬುದು ಕರಾಳಯುಗವಾಗಿದ್ದುದನ್ನು ಕುರಿತು ಇತಿಹಾಸಕಾರರು ಮತ್ತು ಸಮಾಜಶಾಸ್ತ್ರಜ್ಞರು ಹೇರಳವಾಗಿ ಬರೆದಿದ್ದಾರೆ. ಗ್ರೀಕ್ ಅಭಿಜಾತ ಸಮಾಜದ ಬೌದ್ಧಿಕ ಪರಂಪರೆಯ ಪ್ರಸಿದ್ಧ ದಾರ್ಶನಿಕನೂ, ಪ್ರತಿಭಾವಂತನೂ ಆದ ಅರಿಸ್ಟಾಟಲ್‌ಗೆ ಗಂಡಸು ದೇವರ ಪರಿಪೂರ್ಣ ಸೃಷ್ಟಿ ಎನಿಸಿದರೆ ಹೆಂಗಸು ಅಪರಿಪೂರ್ಣ ಸೃಷ್ಟಿ ಎನಿಸಿದಳಂತೆ. ಶಿಕ್ಷಣದಲ್ಲಿ ಮಹಿಳೆಗೆ ಸಮಾನವಕಾಶ ಕಲ್ಪಿಸಬೇಕೆಂದು ಪ್ರತಿಪಾದಿಸಿದನೆನ್ನಲಾದ ದಾರ್ಶನಿಕ ಪ್ಲೇಟೊ 'ಸದ್ಯ' ದೇವರು ನನ್ನನ್ನು ಹೆಣ್ಣಾಗಿ ಹುಟ್ಟಿಸಲಿಲ್ಲವಲ್ಲ ಎನ್ನುತ್ತಿದ್ದನಂತೆ. 'ನ' ಸ್ತ್ರೀ ಸ್ವಾತಂತ್ರ್ಯಂ ಅರ್ಹತಿ ಎಂಬ ನಿಷೇಧವನ್ನು ಕುಖ್ಯಾತ ಮನುಸ್ಮೃತಿ ಹೇರುತ್ತದೆ. ಮನು-ಪೂರ್ವ ಸಮಾಜದಲ್ಲಿ ಮಹಿಳೆಗೆ ಪುರುಷ ಸಮಾನ ಅಧಿಕಾರಗಳು ಇದ್ದವೆಂದು ಅಂಬೇಡ್ಕರ್ ಅಭಿಪ್ರಾಯಪಡುತ್ತಾರಾದರೂ ಸನಾತನವಾದಿ ಪಂಡಿತರು ಒದಗಿಸುವ ಆಧಾರಗಳನ್ನೇ ಆಶ್ರಯಿಸುತ್ತಾರೆ. ಕರಾಳ ಯುಗದ ಮಹಿಳೆಯ ಸಾಮಾಜಿಕ ಸ್ಥಾನಮಾನವನ್ನು ನಿರ್ವಚಿಸಿದ ಆ ಯುಗದ ಪ್ರಾತಿನಿಧಿಕ ಅಭಿವ್ಯಕ್ತಿಗಳ ಪರಿಮಿತಿಯು ಯುಗದ ಪರಿಮಿತಿಯೂ ಆಗಿರುವ ಸಾಧ್ಯತೆಯೇ ಹೆಚ್ಚು. ಆದರೆ ಆಧುನಿಕ ಯುಗದ ಭಾರತೀಯ ಮಹಿಳೆಯ ಸಾಮಾಜಿಕ ಪಾತ್ರವನ್ನು ನಿರ್ದೇಶಿಸುವ ಪ್ರಯತ್ನ ಮಾಡಿದ ಜಸ್ಟಿಸ್ ಮಿಶ್ರ ಮತ್ತು ಅವರಂತಹವರು ಇನ್ನೂ ಆ ''ಕರಾಳ ಯುಗ'' ಧರ್ಮದ ಪರಿಮಿತಿಯನ್ನು ಮೀರದಿರುವುದು ಮಹಿಳಾ ಸಮಾನತೆಯ ದೃಷ್ಟಿಯಿಂದ ಆತಂಕಕಾರಿಯಾದ ವಿಷಯವಾಗಿದೆ.

ಈ ಹಿನ್ನೆಲೆಯಲ್ಲಿ ನೋಡಿದಾಗ 6ನೇ ಶತಮಾನದಿಂದ 16ನೇ ಶತಮಾನದ ಹತ್ತು ಶತಮಾನಗಳ ಸುದೀರ್ಘ ಕಾಲಾವಧಿಯ ಭಕ್ತಿ ಪಂಥವೆಂದು ಕರೆಯಲಾಗುವ ಭಿನ್ನಮತೀಯ ಚಳುವಳಿಗಳು ಮಹಿಳೆಯ ವ್ಯಕ್ತಿತ್ವ ವಿಕಾಸ ಮತ್ತು ಹೆಣ್ಣು - ಗಂಡಿನ ಸಂಬಂಧದ ಪರಿಧಿಯ ವಿಸ್ತಾರಕ್ಕೆ ಕಲ್ಪಿಸಿದ ಅವಕಾಶಗಳು ಕ್ರಾಂತಿಕಾರಕವಾಗಿ ಕಂಡರೆ ಅದರಲ್ಲಿ ಅಸಹಜವಾದದ್ದೇನಿಲ್ಲ. ಜಾಗತಿಕವಾಗಿ ಹಲವಾರು ಚಾರಿತ್ರಿಕ ಸಂದರ್ಭಗಳಿಂದ ರೂಪುಗೊಂಡಿರುವ ಕ್ರಾಂತಿಯ ಬಗೆಗಿನ ಪರಿಕಲ್ಪನೆಯ ನಮ್ಮ ಇಂದಿನ ತಿಳುವಳಿಕೆಗೆ ಈ ಭಿನ್ನಮತೀಯ ಚಳುವಳಿಗಳು ಕ್ರಾಂತಿಕಾರಕವಾಗಿ ಕಾಣಲಾರವು ಎಂಬುದೇನೋ ನಿಜ. ಧಾರ್ಮಿಕ ಚೌಕಟ್ಟಿನೊಳಗೆ ಮೂರ್ತಗೊಂಡ ಈ ಪ್ರತಿಭಟನೆಗಳು ಹೊಸ ಧಾರ್ಮಿಕ ಆಯಾಮಗಳನ್ನು ಸೃಷ್ಟಿಸಿಕೊಂಡಂತೆಯೇ ಸಾಮಾಜಿಕವಾದ ಹೊಸ ಆಯಾಮಗಳ ಸೃಷ್ಟಿಗೂ ಪ್ರತ್ಯಕ್ಷ ಪ್ರೇರಕ ಶಕ್ತಿಗಳಾಗಿವೆ. ಹಾಗೆಯೇ ದೇಶೀ ಭಾಷೆಗಳ ಸಾಹಿತ್ಯಕ್ಕೂ ಮೌಲಿಕವಾದ ಕೊಡುಗೆಯನ್ನು ನೀಡಿವೆ. ಸಾಮಾಜಿಕವಾಗಿ ಶತಮಾನಗಳವರೆಗೆ ದುರ್ಬಲಗೊಳಿಸಲ್ಪಟ್ಟ ಸಮುದಾಯಗಳು ಮತ್ತು ಮಹಿಳೆ ಸೃಜನಶೀಲತೆಯನ್ನು ಪಡೆದುಕೊಳ್ಳಲು ಸಾಧ್ಯವಾದದ್ದು ಭಕ್ತಿ ಪಂಥದ ಚಳುವಳಿಗಳ ಮೂಲಕವೇ.

ಪುರುಷನೆಂಬ ಅಹಮಿಕೆಯು ಅಳಿಯದವನಿಗೆ ಭಕ್ತಿಪಂಥದಲ್ಲಿ ಸ್ಥಾನವಿಲ್ಲ. ಅಹಂಕಾರವು ಭಕ್ತಿಮಾರ್ಗದ ಮೋಕ್ಷ ಸಾಧನೆಗೆ ತೊಡಕು. ಭಕ್ತಿಯ ಅನುಭಾವದಲ್ಲಿ ಗಂಡು ಹೆಣ್ಣಾಗುತ್ತಾನೆ. ಭಕ್ತರೆಲ್ಲ ಹೆಣ್ಣು, ಹೆಣ್ಣಾದ ಅನುಭಾವಿಗಳಿಗೆ ದೈವವೊಂದೇ. ಸಮರ್ಪಣೆ, ವಿನಮ್ರತೆ, ಹೆಣ್ಣು ಭಾವ ಭಕ್ತಿಪಂಥದ ಪ್ರಧಾನ ನೆಲೆಗಳು. ಭಕ್ತಿಪಂಥದ ಮಹತ್ವದ ಸಾಧನೆಯೆಂದರೆ ಮಾತೃಭಾಷೆಯಲ್ಲಿ ಸಾಹಿತ್ಯ ರಚಿಸಿ ಮಾತೃಪ್ರಧಾನ ಭೂಮಿಕೆಯ ತಾಯ್ನುಡಿಯನ್ನೂ ಆ ಮೂಲಕ ಭಾಷಾ ಸಾಹಿತ್ಯಗಳನ್ನೂ ಬೆಳೆಸಿದ್ದು. ವೈದಿಕ ಸಮಾಜದ ಅತಿ ಎತ್ತರದ ಸ್ಥಾನವನ್ನೂ, ಆರ್ಯರ ಪುರುಷ ಪ್ರಧಾನ ವ್ಯವಸ್ಥೆಯ ಪಿತೃಸ್ಥಾನವನ್ನೂ ಅಲಂಕರಿಸಿದ್ದವರು ಬ್ರಾಹ್ಮಣರು, ಭೂಸುರರು ದೇವರೊಂದಿಗೆ ಮಾತನಾಡುವ ಭಾಷೆ ಸಂಸ್ಕೃತ - ದೇವಭಾಷೆ, ಭಕ್ತಿ ಚಳುವಳಿಯು ಧಾರ್ಮಿಕ ಕ್ಷೇತ್ರದಲ್ಲಿ ಪಿತೃಭಾಷೆಯೂ, ದೇವಭಾಷೆಯೂ ಆಗಿದ್ದ ಸಂಸ್ಕೃತವು ಗಳಿಸಿದ್ದ ಏಕಸ್ವಾಮ್ಯತೆಯನ್ನು ಮುರಿದು ಮಾತೃಭಾಷೆಯಲ್ಲಿ ಭಕ್ತನು ಆರಾಧ್ಯ ದೈವದೊಂದಿಗೆ ಮಾತನಾಡಲು ಸಾಧ್ಯವಾಗಿದ್ದು ಹಾಗೂ ಪುರೋಹಿತರಂತಹ ದಲ್ಲಾಳಿಗಳ ಮತ್ತು ಧಾರ್ಮಿಕ ಸಾಹಿತ್ಯದ ನೆರವಿಲ್ಲದೆ ದೇವರೊಂದಿಗೆ ಸಂವಾದ ನಡೆಸಲು ಸಾಧ್ಯವಾದದ್ದು ಭಕ್ತಿ ಚಳುವಳಿಯಲ್ಲಿಯೇ ಎಂಬುದನ್ನು ಎ. ಕೆ. ರಾಮಾನುಜನ್ ಗುರುತಿಸುತ್ತಾರೆ.

ಭಕ್ತಿ ಪಂಥದ ಈ ಆಂದೋಲನದಲ್ಲಿ ಕಂಡುಬರುವ ಪರ್ಯಾಯಗಳು ಮೂಲ ನೆಲೆಯಲ್ಲಿ ಸ್ತ್ರೀ ಪ್ರಧಾನ ಅಂಶಗಳಿಂದ ಪ್ರೇರಿತವಾದಂತವುಗಳಾಗಿವೆ. ದಕ್ಷಿಣದಲ್ಲಿ ಪ್ರಾರಂಭವಾಗಿ ಅಲೆ ಅಲೆಯಾಗಿ ಹರಡುತ್ತಾ ಉತ್ತರ ಭಾರತವನ್ನು ವ್ಯಾಪಿಸಿ ಬಹುಶಃ ಅಖಿಲ ಭಾರತ ವ್ಯಾಪ್ತಿಯನ್ನು ಪಡೆದ ಈ ಚಳುವಳಿಯಲ್ಲಿ ಮಹಿಳಾ ಸಂತರು ನಿರ್ವಹಿಸಿದ ಪಾತ್ರವನ್ನು ಗಮನಿಸಿದರೆ ಈ ಧಾರ್ಮಿಕ ಚಳುವಳಿಯು ಮಹಿಳೆಯರಿಗೆ ವಿಮೋಚನೆಯ ಚಾಲಕ ಶಕ್ತಿಯಾಗಿದ್ದುದು ಕಂಡುಬರುತ್ತದೆ. ಪ್ರಭಾವಶಾಲಿ ವ್ಯಕ್ತಿತ್ವದ ಒಬ್ಬ ಮಹಿಳೆಯಾದರೂ ಇರದ ಭಕ್ತಿ ಚಳುವಳಿಯು ದಕ್ಷಿಣದಲ್ಲೂ ಇಲ್ಲ, ಉತ್ತರದಲ್ಲೂ ಇಲ್ಲ. ಅಕ್ಕ, ಮೀರಾ, ಅವ್ವೆಯಾರ್, ಆಂಡಾಳ್, ಲಾಲದೇಡ್‌ನಂತಹವರು ಸಾಂಪ್ರದಾಯಿಕ ಅರ್ಥದ ಗಂಡು-ಹೆಣ್ಣಿನ ಸಂಬಂಧವನ್ನು ಬದಲಾಯಿಸುವ, ಧಿಕ್ಕರಿಸುವ ಅಥವಾ ತಿರಸ್ಕರಿಸುವ ನಿಲುವುಗಳು ಪರಂಪರಾಗತ ಮೌಲ್ಯಗಳಿಗೆ ಒಡ್ಡಿದ ಸವಾಲುಗಳಾಗಿದ್ದವು.

ಭಕ್ತಿ ಚಳುವಳಿಯ ಪುರುಷರಿಗೆ ಪುರುಷಪ್ರಧಾನ ಸಮಾಜದಲ್ಲಿ ಲಿಂಗಭೇದವನ್ನಾಧರಿಸಿದ ಸಾಮಾಜಿಕ ಪ್ರತಿಕೂಲಗಳಿರಲಿಲ್ಲ. ವಿವಾಹಿತರಾಗಿ ಕುಟುಂಬ ಜೀವನ ಸಾಗಿಸುವುದು ಭಕ್ತಿಯ ಸಮರ್ಪಣಾ ಜೀವನಕ್ಕೆ ಸಾಮಾಜಿಕವಾದ ಆಪತ್ತನ್ನು ಒಡ್ಡುತ್ತಿರಲಿಲ್ಲ. ಗೃಹಸ್ಥ ಜೀವನವನ್ನು ಸ್ವೀಕರಿಸಿಯೂ ಭಕ್ತನಾಗಿ ಬೀದಿಗಿಳಿಯುವದು, ಬೋಧಕನಾಗಿ ಊರೂರು ಸುತ್ತುವದು ಸಮಸ್ಯೆಯನ್ನು ಸೃಷ್ಟಿಸುತ್ತಿರಲಿಲ್ಲ. ಆದರೆ ಭಕ್ತಿಪಂಥದ ಮಹಿಳೆಯ ಇಂತಹ ಸ್ವಾತಂತ್ರ್ಯಾಪೇಕ್ಷೆಯನ್ನು ಮಾನ್ಯ ಮಾಡುವುದು ಸಾಂಪ್ರದಾಯಿಕ ವ್ಯವಸ್ಥೆಯಲ್ಲಿ ಸಾಧ್ಯವಿರಲಿಲ್ಲ. ಭಕ್ತಿಪಂಥದ ಮಹಿಳಾ ಸಂತರು ಪುರುಷ ಸಂತರಿಗೆ ಎದುರಾದಾಗ ಎರಡು ವಿಶಿಷ್ಟ ರೀತಿಯ ಸಮಸ್ಯೆಗಳನ್ನು ಎದುರುಗೊಳ್ಳುತ್ತಾರೆ. ಈ ಸಮಸ್ಯೆಗಳೆಂದರೆ ವಿವಾಹ ಮತ್ತು ಹೆಣ್ಣೆಂಬ ದೇಹ. ಸಂತ ಮಹಿಳೆಯರಲ್ಲಿ ಬಹಿನಾಭಾಯಿಯಂಥವರನ್ನು ಬಿಟ್ಟರೆ ಮೋಕ್ಷ ಸಾಧನೆಯ ಹುಡುಕಾಟದಲ್ಲಿ ತಮ್ಮನ್ನು ಸಕ್ರಿಯವಾಗಿ ತೊಡಗಿಸಿಕೊಂಡ ಮಹಿಳೆಯರು ಸಾಂಪ್ರದಾಯಿಕ ಅರ್ಥದ ವಿವಾಹ ಮತ್ತು ದಾಂಪತ್ಯವನ್ನು ಒಪ್ಪಿಕೊಂಡವರಲ್ಲ. ಆದರೂ ಭಕ್ತಿ ಜೀವನವನ್ನು ಆಲಂಗಿಸಿಕೊಂಡ ಸಾಧಕ - ಪತಿಯ "ಇಚ್ಛೆಯನರಿತು ನಡೆವ ಸತಿ" ಯಾಗಿ ಸಾಧ್ವಿಯರೆನಿಸಿಕೊಂಡ ತಿರುವಳ್ಳುವರ್‌ನ ಆದರ್ಶಮಯ ಆಜ್ಞಾನುವರ್ತಿ ವಾಸುಕಿಯಂತಹ ಪತ್ನಿಯರಿದ್ದಾರೆ. ಮಹಾರಾಷ್ಟ್ರ ಮತ್ತು ಗುಜರಾತ್‌ಗಳಲ್ಲಿ ಕಂಡುಬರುವಂತೆ ದಾಂಪತ್ಯವನ್ನು ಒಪ್ಪಿಕೊಂಡು ಅದರ ಪರಿಮಿತಿಯೊಳಗೆ ಭಕ್ತಿ ಚಳುವಳಿಯಲ್ಲಿ ಭಾಗಿಯಾದವರಿದ್ದಾರೆ. ಮುಕ್ತಾ, ಸೋಯ್‌ರಾ ಮತ್ತು ಅಪೂಬಾಯಿಯರಂತಹ ಮಹಿಳಾ ಸಂತರು ಈ ಗುಂಪಿಗೆ ಸೇರಿದವರು. ಕೌಟುಂಬಿಕ ಸಂಬಂಧಗಳಲ್ಲಿ ಸಾಂಪ್ರದಾಯಿಕ

ಚೌಕಟ್ಟನ್ನು ಸ್ವಲ್ಪ ಮಟ್ಟಿಗೆ ಪ್ರಶ್ನಿಸಿದರೂ ಅದನ್ನು ತಿರಸ್ಕರಿಸದೆ ಸಾಧ್ವಿಯರಾಗಿ ಅಥವಾ ಪರಮಾರ್ಥಿ ಎಂದು ಪರಿಗಣಿಸಲ್ಪಟ್ಟ ಸಾಧಕಳ ಸ್ವತಂತ್ರ ವ್ಯಕ್ತಿತ್ವ ವಿಕಾಸವನ್ನು ಬಯಸದ ಮಹಿಳಾ ಸಂತರಾಗಿ ಜೀವಿಸಿದ ಇಂತಹ ಮಹಿಳೆಯರದ್ದು ಒಂದು ಗುಂಪು.

ಮತ್ತೊಂದು ಗುಂಪಿನ ಮಹಿಳಾ ಸಂತರು ವಿವಾಹ ಮತ್ತು ಕೌಟುಂಬಿಕ ಜೀವನವನ್ನು ತಮ್ಮ ಧಾರ್ಮಿಕ ಆಕಾಂಕ್ಷೆಗಳಿಗೆ ಮಾರಕವೆಂದು ಬಗೆಯುತ್ತಾರೆ. ಆ ಮೂಲಕ ಈ ಸಂಬಂಧಗಳನ್ನು ಧಿಕ್ಕರಿಸುತ್ತಾರೆ ಅಥವಾ ತಿರಸ್ಕರಿಸುತ್ತಾರೆ. ಹಿಂದೂ ಮತ್ತು ಬೌದ್ಧ ಸಂಪ್ರದಾಯಗಳು ಮಹಿಳೆಗೆ ಸಾಧಕಳ ಸ್ವತಂತ್ರ ವ್ಯಕ್ತಿತ್ವವನ್ನೂ, ಕೌಟುಂಬಿಕ ಸಂಬಂಧಗಳಲ್ಲಿ ಪುರುಷನಿಗಿದ್ದ ಗೌರವದ ಸಮಾನ ಸ್ಥಾನವನ್ನೂ ನೀಡುವಂತಹ ಬೌದ್ಧಿಕ ಮತ್ತು ಸಾಮಾಜಿಕ ರಚನೆಗಳಾಗಿರಲಿಲ್ಲ. ಸಾಧಕಳ ಸ್ವತಂತ್ರ ವ್ಯಕ್ತಿತ್ವ ವಿಕಾಸದ ದೃಷ್ಟಿಯಿಂದ ಇವೆರಡೂ ವಿಫಲ ಸಾಮಾಜಿಕ ರಚನೆಗಳು.

ಬೌದ್ಧ ಧರ್ಮವು ಪ್ರಭಾವಶಾಲಿ ಭಿನ್ನಮತೀಯ ಚಳುವಳಿ. ಬುದ್ಧನ ಸಂಘ - ಗಣದ ಕೂಟ ರಚನೆಯಲ್ಲಿ ಬ್ರಾಹ್ಮಣ ವರ್ಣಕ್ಕೆ ಸ್ಥಾನವಿರಲಿಲ್ಲವೆಂಬುದು ನಿಜವಾದರೂ ಮಹಿಳೆಯ ಬಗ್ಗೆ ಬುದ್ಧನ ನಿಲುವು ಕ್ರಾಂತಿಕಾರಕ ಖಚಿತತೆಯುಳ್ಳದ್ದಾಗಿರಲಿಲ್ಲ. ಗೃಹಸ್ಥ ಜೀವನವನ್ನು ಆರಿಸಿಕೊಂಡ ಮಹಿಳೆಯು ಪುರುಷನಿಗೆ ಅಧೀನಳಾಗಿ ಅವನ ಆಜ್ಞಾನುವರ್ತಿಯಾಗಿ ಬಾಳ್ವೆ ನಡೆಸುವುದನ್ನು ಸ್ತ್ರೀ ಧರ್ಮವೆಂದೇ ಬಗೆಯಲಾಗುತ್ತಿತ್ತು.

ಬುದ್ಧನು ಆಮ್ರಪಾಲಿಗೆ ದೀಕ್ಷೆ ನೀಡಿದನಾದರೂ ಭಿಕ್ಷುಣಿಯರನ್ನು ಸಂಘ - ಗಣದಲ್ಲಿ ಪ್ರತ್ಯೇಕ ಗುಂಪುಗಳಾಗಿ ಇಡಲಾಗುತ್ತಿತ್ತು. ಬುದ್ಧನ ಆಪ್ತ ಅನುಯಾಯಿಯಾದ ಆನಂದನು ಇಂತಹ ಪ್ರತ್ಯೇಕತೆಯ ಅಗತ್ಯವನ್ನು ಮತ್ತೆ ಮತ್ತೆ ಒತ್ತಿ ಹೇಳುವುದು ಕಂಡು ಬರುತ್ತದೆ. ಬೌದ್ಧ ಧರ್ಮವು ಎಲ್ಲ ಧರ್ಮಗಳಿಗಿಂತಲೂ ಹೆಚ್ಚು ಸಾಮಾಜಿಕವಾದ ಧರ್ಮ ಎನ್ನುವ ಕೋಸಾಂಬಿಯವರು ಬೌದ್ಧ ಧರ್ಮದಲ್ಲಿ ಭಿಕ್ಷುಣಿಯರಿಗೆ ಸಮಾನತೆಯನ್ನು ನೀಡಲಾಗುತ್ತಿತ್ತು ಎನ್ನುತ್ತಾರೆ. ಆದರೆ ಈ ಅಭಿಪ್ರಾಯವನ್ನು ಸಾಪೇಕ್ಷತೆಯ ಹಿನ್ನೆಲೆಯಲ್ಲಿ ಒಪ್ಪಬಹುದು. ಬುದ್ಧನ ಕಾಲದಲ್ಲೇ ಭಿಕ್ಷು ಸಂಘಗಳು ನೈತಿಕವಾಗಿ ವಿಘಟನೆ ಹೊಂದತೊಡಗಿದ್ದವು. ಹಲವು ಆಷಾಡಭೂತಿಗಳು ಭಿಕ್ಷುಗಳಾಗಿ ಸಂಘದಲ್ಲಿ ಸೇರ್ಪಡೆಯಾಗಿ ವಿಹಾರಗಳಲ್ಲಿ ವಿಷಯಾಸಕ್ತ ಚಟುವಟಿಕೆಗಳು ಹೆಚ್ಚುತ್ತಿರುವಂತಹ ಸನ್ನಿವೇಶವಿದ್ದಂತೆ ತೋರುತ್ತದೆ. ವಿಹಾರಗಳು ಬಸಿರಿ ಬಾಣಂತಿಯರ ಗೂಡುಗಳಾಗುತ್ತಿದ್ದ ಘಟನೆಗಳ ಬಗ್ಗೆ ಪ್ರಾರಂಭಿಕ ಕಾಲದ ಬೌದ್ಧ ಗ್ರಂಥ ಚುಲ್ಲವಗ್ಗ ಪ್ರಸ್ತಾಪಿಸುತ್ತದೆ. ಬಹುಶಃ ಇಂತಹ ನಿಗ್ರಹಾತೀಕ ಘಟನೆಗಳಿಂದಾಗಿ ಆನಂದನು ಪ್ರತ್ಯೇಕತೆಯ ಪ್ರತಿಪಾದಕನಾಗಿರಬಹುದೆಂದು ಊಹಿಸಲು ಸಾಧ್ಯವಿದೆ.

ಅದೇನೇ ಇದ್ದರೂ ಬೌದ್ಧ ಮತವು ತಾಂತ್ರಿಕ ಆಚರಣೆಗಳತ್ತ ಹೊರಳುವವರೆಗೆ ಮಹಿಳೆಗೆ ಬೌದ್ಧ ಧರ್ಮದಲಿ ಸಾಂಪ್ರದಾಯಿಕ ಸಂಕೋಲೆಗಳಿಂದ ವಿಮೋಚನೆಪಡೆಯುವ ಚಾಲಕ ಶಕ್ತಿ ದೊರಕಲಿಲ್ಲ. "ನಾರಿ ನರಕಕ್ಕೆ ದಾರಿ" ಎಂಬಂತಹ ಹಿಂದೂ ಸನ್ನಿವೇಶಗಳ ಸಮಾನಾಂತರ ಸನ್ನಿವೇಶಗಳು ಬೌದ್ಧ ಸಾಹಿತ್ಯದಲ್ಲೂ ಕಾಣಿಸಿಕೊಳ್ಳುತ್ತವೆ. ಪುರುಷ ದೃಷ್ಟಿಕೋನಕ್ಕೆ ಅಂಟಿಕೊಂಡೇ ನಡೆದ ಬೌದ್ಧ ಸಾಹಿತ್ಯವು ಹೆಣ್ಣು ಹಿಂಗದ ಕಾಮುಕ ಪ್ರಾಣಿ, ಮದುವೆ ಎಂದರೆ ಮರಣ, ಚಂಚಲತೆಯ ಮತ್ತೊಂದು ರೂಪವೇ ಹೆಣ್ಣು ಮುಂತಾಗಿ ಪ್ರಚಾರ ಮಾಡತೊಡಗಿದ ಉದಾಹರಣೆಗಳು ಹೇರಳವಾಗಿ ದೊರಕುತ್ತವೆ. ಕುನಾಲಜಾತಕವಂತೂ ಹೆಣ್ಣು ಸ್ವಭಾವತಃ ಲಂಪಟಳು, ಪುರುಷನನಾಶಕ್ಕಾಗಿ ಜನ್ಮ ತಳೆದಳು ಎನ್ನುತ್ತದೆ. ಸ್ತ್ರೀ ದ್ವೇಷಿ ಎಂಬರ್ಥ ಬರುವ ಅನಿತ್ತಿಗಂಧ ಎಂಬ ಪಾತ್ರವೊಂದು ಕ್ಷತ್ರಿಯ ಸಂಹಾರ ಮಾಡುತ್ತದೆ. ಹೆಣ್ಣು ವಿಶ್ವಾಸಾರ್ಹಳಲ್ಲವಾದ್ದರಿಂದ ಹರೆಯದ ಹುಡುಗರು ವಿವಾಹ ಮತ್ತು ಕುಟುಂಬ ಜೀವನಕ್ಕೆ ಆಕರ್ಷಿತರಾಗಿ ದುಃಖ ಅನುಭವಿಸದಿರಲೆಂದು ಇಂತಹ ಮಹಿಳಾ ವಿರೋಧಿ ಪ್ರಚಾರವನ್ನು ಜಾತಕ ಕತೆಗಳು ಮಾಡಿರಬಹುದು ಎನ್ನುತ್ತಾರೆ ಗ್ಯಾರೆಟ್ ಜೋನ್ಸ್.

ಈ ಚಿಂತನ ಕ್ರಮವು ಇಡಿಯಾಗಿ ಪುರುಷ ಪ್ರಧಾನ ಮೌಲ್ಯಗಳಿಂದ ರೂಪುಗೊಂಡಿರುವಂತಹುದು ಎಂದು ಬಿಡಿಸಿ ಹೇಳುವ ಅಗತ್ಯವಿಲ್ಲ. ಬುದ್ಧನ ನಂತರ ಕಾಲದಲ್ಲಿ ರಚಿತವಾದ ಬೌದ್ಧ ಸಾಹಿತ್ಯದಲ್ಲಿ ವಿಪುಲವಾದ ಪ್ರಕ್ಷಿಪ್ತಗಳು ಕಂಡುಬರುವುದು ನಿಜವಾದರೂ ಪಟ್ಟ ಭದ್ರ ಬೌದ್ಧಿಕ ರಚನೆಗಳನ್ನು ಸ್ಥಾಯಿಗೊಳಿಸಲು ನಡೆಸಿದ ಪಿತೂರಿಯ ನಿದರ್ಶನಗಳಿವು. ಹಿಂದೂ ಧರ್ಮದ ಪ್ರಮುಖ ನೆಲೆಯಿಂದ ವಿಮುಖಗೊಂಡ ಬೌದ್ಧ ಧರ್ಮವು ಹೆಣ್ಣಿನ ಬಗ್ಗೆ ತಳೆದ ನಿಲುವುಗಳಿಗಿಂತ ಭಕ್ತಿ ಚಳುವಳಿಯು ತಳೆದ ನಿಲುವುಗಳು, ಪರ್ಯಾಯ ಸಾಂಸ್ಕೃತಿಕ ನೆಲೆಯಿಂದ ಹೇಗೆ ಕ್ರಾಂತಿಕಾರಿಯಾಗಿದೆ ಎನ್ನುವುದ ಗಮನಿಸಬೇಕಾದ ಸಂಗತಿಯಾಗಿದೆ.

ಭಕ್ತಿ ಚಳುವಳಿಯಲ್ಲಿ ವಿವಾಹ ಮತ್ತು ಕೌಟುಂಬಿಕ ಸಂಬಂಧಗಳ ಸಮಸ್ಯೆಯನ್ನು ನಿಷ್ಠುರ ವಿಧಾನದಲ್ಲಿ ಬಗೆಹರಿಸಿಕೊಳ್ಳುವ ಮಹಿಳಾ ಸಂತರು ಪುರಷ ಪ್ರಧಾನ ಮೌಲ್ಯಗಳನ್ನು ತೀವ್ರವಾಗಿ ವಿರೋಧಿಸುತ್ತಾರೆ. ವಿರೋಧಗಳು, ವ್ಯಕ್ತವಾಗುವ ಬಗೆ ಹಲವು. ಆದರೆ ಈ ವಿನ್ಯಾಸದ ಕೇಂದ್ರ ವಸ್ತುವೆಂದರೆ ಪುರುಷನು ಧಾರ್ಮಿಕ ಸಾಧನೆಯ ಮಾರ್ಗದಲ್ಲಿ ಬಂದೊದಗಿದ ವಿಪತ್ತು ಎಂಬುದು ನಿಖಾಯಗಳು ಮತ್ತು ಜಾತಕಗಳ ಬೌದ್ಧಯುಗದ ಹಾಗೂ ಸ್ಮೃತಿಗಳ ಕಾಲದ ದೃಷ್ಟಿಕೋನವನ್ನು ಈ ಗುಂಪಿನ ಮಹಿಳಾ ಸಂತರು

ತಲೆಕೆಳಗಾಗಿಸಿರುತ್ತಾರೆ. ಈ ಯುಗಗಳಲ್ಲಿ ಮೋಕ್ಷಸಾಧನೆಗೆ ಹೆಣ್ಣು ತೊಡಕು ಎಂದಾದರೆ ಭಕ್ತಿ ಚಳುವಳಿಯಲ್ಲಿ ಮೋಕ್ಷ ಸಾಧನೆಗೆ ಗಂಡು ತೊಡಕು ಎಂಬ ಪರಿಕಲ್ಪನೆಯ ಆಧಾರ ಇವರಿಗೆ ಚಾಲಕ ಶಕ್ತಿಯನ್ನು ಒದಗಿಸುತ್ತದೆ. ಇಲ್ಲಿ ಗಂಡಂದಿರು ಕಾಮುಕರಾಗಿ, ಕಂಟಕರಾಗಿ ಮೋಕ್ಷ ಸಾಧನೆಗೆ ಅಡ್ಡಿಯಾಗಿರುತ್ತಾರೆ. ಈ ಸಮಸ್ಯೆಯನ್ನು ಅವ್ವೆಯು ಇಷ್ಟ ದೈವಕ್ಕೆ ತನ್ನ ಯೌವ್ವನವನ್ನು ಸಮರ್ಪಿಸಿ ಮುಪ್ಪನ್ನು ಪಡೆಯುವುದರ ಮೂಲಕ ಬಗೆಹರಿಸಿಕೊಳ್ಳುತ್ತಾರೆ. ಕಾಮಾಸಕ್ತಿಗೆ ಪ್ರೇರಕವೂ ಪೋಷಕವೂ ಆಗಬಹುದೆಂಬ ಕಾರಣದಿಂದ ಅವಳು ಯೌವ್ವನವನ್ನು ಪವಾಡ ಸದೃಶಳಾಗಿ ದಾಟಿ, ಬೋಧಕಳಾಗಿ ಊರೂರು ಸುತ್ತುತ್ತಾಳೆ. ಆಂಡಾಳ್ ಇಷ್ಟದೇವತೆಯಾದ ಕೃಷ್ಣನ ವಿಗ್ರಹದಲ್ಲಿ ಲೀನವಾಗುತ್ತಾಳೆ. ಇಂತಹ ಸನ್ನಿವೇಶಗಳಲ್ಲಿ ಈ ಮಹಿಳಾ ಸಂತರು ತಮ್ಮನ್ನು ವಿವಾಹ ಮತ್ತು ಕೌಟುಂಬಿಕ ಜೀವನದಿಂದ ಹೊರತುಪಡಿಸಿಕೊಳ್ಳುವ ಪ್ರಯತ್ನಗಳು ಕಂಡುಬರುತ್ತದೆ.

ಆದರೆ ಕರಿಕಾಲಮ್ಮೆ ತನ್ನ ಸೌಂದರ್ಯವನ್ನು ಇಷ್ಟದೈವವಾದ ಶಿವನಿಗೆ ಸಮರ್ಪಿಸುತ್ತಾಳೆ. ಗಂಡನಾಗಲೀ, ಬೇರಾವ ಪುರುಷನಾಗಲೀ ತನ್ನನ್ನು ಕಣ್ಣೆತ್ತಿ ನೋಡದಂತಹ ಕುರೂಪ ಕಂಕಾಲ ಸ್ಥಿತಿಯನ್ನು ವರವಾಗಿ ಪಡೆದು ದಾಂಪತ್ಯವನ್ನು ತಿರಸ್ಕರಿಸುತ್ತಾಳೆ.

ಮೀರಾ ಮೋಕ್ಷ ಸಾಧನೆಯ ಮಾರ್ಗದಲ್ಲಿ ದಾಂಪತ್ಯವು ತಂದೊಡ್ಡುವ ಬಾಧಕಗಳನ್ನು ಅನುಭವಿಸುವುದು ನಿಜವಾದರೂ ನಂತರ ತವರನ್ನೂ, ಗಂಡನನ್ನೂ, ಗಂಡನ ಮನೆಯನ್ನೂ ತಿರಸ್ಕರಿಸುತ್ತಾಳೆ. ಸಿಸೋದಿಯಾ ಕುಟುಂಬದ ರಜಪೂತ ಸಮುದಾಯಕ್ಕೆ ಸೇರಿದ ಮೀರಾ ಚಮ್ಮಾರನಾದ ರೋಹಿದಾಸನನ್ನು ಗುರುವಾಗಿ ಸ್ವೀಕರಿಸಿದವಳು. ಸಾಧುಗಳ ಸಾಮೀಪ್ಯದಲ್ಲಿ ಕೆಳಜಾತಿಯ ಭಕ್ತ ಜನತೆಯ ಜೊತೆಗೆ ಗೆಜ್ಜೆಕಟ್ಟಿಕೊಂಡು ಭಕ್ತಿಪರವಶಳಾಗಿ ಹಾಡುತ್ತಾ, ಕುಣಿಯುತ್ತಾ ತನ್ನ ಇಷ್ಟದೇವತೆ ಗಿರಿಧರನನ್ನು ಆರಾಧಿಸತೊಡಗುತ್ತಾಳೆ. ಶೀಲ ರಜಪೂತ ಹೆಣ್ಣಿನ ಪರಮಮೌಲ್ಯ, ಸಾಂಪ್ರದಾಯಿಕವಾದ ಸತಿ ಮತ್ತು ಜೋಹರ್ ಪದ್ಧತಿಗಳು ಇದಕ್ಕೆ ಉತ್ತಮ ನಿದರ್ಶನಗಳು. ಹಾಗೆಯೇ ಹೆಣ್ಣಿನ ಶೀಲ ರಕ್ಷಣೆ ರಜಪೂತ ಸಮಾಜದ ವೀರ ಪರಂಪರೆಯ ಸಾಂಪ್ರದಾಯಿಕ ಮೌಲ್ಯ. ಹೆಣ್ಣಿಗೆ ಕುಟುಂಬದ ಹೊರಗೆ ಸಾರ್ವಜನಿಕವಾದ ಬದುಕಿಲ್ಲ. ಪರಂಪರಾಗತವಾದ ಈ ಎಲ್ಲಾ ಮೌಲ್ಯಗಳನ್ನು ಮೋಕ್ಷ ಸಾಧನೆಗಾಗಿ ತಿರಸ್ಕರಿಸಿದವಳು ಮೀರಾ.

ಪ್ರತಿಷ್ಠಿತ ಮನೆತನವಾದ ಸಿಸೋದಿಯಾ ಕುಟುಂಬದ ಸೊಸೆಯಾಗಿ ಬಂದ ಮೀರಾಳ ಈ ವರ್ತನೆಗಳಿಂದ ಬೇಸತ್ತು ಅವಮಾನಿತವಾದ ಗಂಡ ಅವಳನ್ನು ಕೊಲೆ ಮಾಡಲು ಹಲವು ಬಗೆಯಾಗಿ ಪ್ರಯತ್ನಿಸಿದನೆಂಬುದು ಮೀರಾಳ ಭಜನೆಗಳಿಂದಲೂ, ಐತಿಹ್ಯಗಳಿಂದಲೂ ತಿಳಿದುಬರುತ್ತದೆ. ಭಕ್ತಿಚಳುವಳಿಯ ಮಹಿಳಾ ಸಂತರಲ್ಲಿ ಮೀರಾಳಿಗೆ ವಿಶಿಷ್ಟವೂ, ಮಹತ್ವವೂ ಆದ ಸ್ಥಾನವಿದೆ. ಉತ್ತರ ಭಾರತದಲ್ಲಿ ಎಲ್ಲೆಲ್ಲೂ ಕೇಳಬಹುದಾದ ಮಹಿಳಾ ಸಂತಳ ಹೆಸರು ಇದೊಂದೆ. ಮೀರಾ ಭಜನ್‌ಗಳನ್ನು ರಜಪೂತ ಸಮಾಜದ ಪ್ರತಿಷ್ಠಿತ ಜಾತಿಗಳು ನಾಶಮಾಡಲು ಪ್ರಯತ್ನಿಸಿದ ಹಲವಾರು ಉದಾಹರಣೆಗಳನ್ನು ಬೆಳಕಿಗೆ ತರಲಾಗಿದೆ. ಮೀರಾಳ ಹೆಸರೆತ್ತುವುದೇ ಅಪರಾಧ ಎನ್ನುವಂತಹ ಪರಿಸ್ಥಿತಿ ರಾಜಸ್ಥಾನದ ಬಲಿಷ್ಠ ಜಾತಿಗಳ ಸಾಂದ್ರತೆಯಿರುವ ಪ್ರದೇಶದಲ್ಲಿರುವುದನ್ನು ಹಲವರು ಗುರುತಿಸಿದ್ದಾರೆ. ಕೆಳಜಾತಿಗಳಲ್ಲಿ ಮೌಖಿಕ ಪರಂಪರೆಯಾಗಿ ಮೀರಾ ಭಜನ್‌ಗಳು ಮತ್ತು ಐತಿಹ್ಯಗಳು ಹೇರಳವಾಗಿ ಸಿಗುತ್ತವೆ. ಮೀರಾಳ ಭಕ್ತಿಸಾಹಿತ್ಯದ ಪುನರ್‌ರಚನೆಗೆ ಸಾಧ್ಯವಾದದ್ದು ಈ ಜಾನಪದ ಮೂಲಕದಿಂದಲೇ ಎಂಬ ಅಭಿಪ್ರಾಯವಿದೆ. ಮೀರಾ ಧಾರ್ಮಿಕವಾಗಿ, ಸಾಮಾಜಿಕವಾಗಿ ಸಂತ್ರಸ್ತ ಕೆಳಜಾತಿಗಳಿಗೆ ವಿಮೋಚನೆಯ ಪ್ರತೀಕಗಳಾಗಿದ್ದಳೆಂಬುದು ಈ ಚಳುವಳಿಯ ಅನನ್ಯತೆಯನ್ನು ತೋರಿಸುತ್ತದೆ.

ಕಾಶ್ಮೀರದ ಲಾಲ್‌ದೇಡ್ ಮತ್ತು ಅಕ್ಕಮಹಾದೇವಿ ವಿವಾಹ ಮತ್ತು ದಾಂಪತ್ಯವನ್ನು ಧಿಕ್ಕರಿಸುವುದರ ಜೊತೆಗೆ ಮೋಕ್ಷ ಸಾಧನೆಯ ಮಾರ್ಗದಲ್ಲಿ ಹೆಣ್ಣೆಂಬ ದೇಹವು ತೊಡಕಾಗುವ ಸಮಸ್ಯೆಯನ್ನು ಎದುರಿಸುತ್ತಾರೆ. ಮೀರಾಳು ಕೂಡ ಹೆಣ್ಣಾಗಿ ಪುರುಷ ಸಂತರ ಒಡನಾಟದಲ್ಲಿ ಒದಗಬಹುದಾದ ದೈಹಿಕ ಸಮಸ್ಯೆಯ ಆಪತ್ತನ್ನು ಅನುಭವಿಸಿ ದಾಟುತ್ತಾಳೆ. ಐತಿಹ್ಯವೊಂದರ ಪ್ರಕಾರ ಸಾಧುವೊಬ್ಬ ತನ್ನ ಕನಸಿನಲ್ಲಿ ಕೃಷ್ಣನು ಪ್ರತ್ಯಕ್ಷನಾಗಿ ಮೀರಾಳ ಜೊತೆ ಮಲಗುವಂತೆ ತನಗೆ ಆಜ್ಞಾಪಿಸಿದನೆಂದು ಹೇಳುತ್ತಾನೆ. ಮೀರಾ ಅವನಲ್ಲಿನ ಹೆಣ್ಣು ದೇಹಕ್ಕಾಗಿ ಹಾತೊರೆಯುವ ಕಾಮಾಂಧತೆಯ ಕುಟಿಲತೆಯನ್ನು ಬಯಲಿಗೆಳೆಯುತ್ತಾಳೆ. ಸಂತರು ಸೇರಿದ ಗೋಷ್ಠಿಯ ನಡುವೆ ಹಾಸಿಗೆಯನ್ನು ಸಿದ್ಧಪಡಿಸಿ ''ಮಲಗು ಬಾ, ದೈವೇಚ್ಛೆ, ಈಗೇಕೆ ಅಂಜಿಕೆ'' ಎಂದಳಂತೆ. ಆ ಸಾಧು ತನ್ನ ನೀಚತೆಗೆ ನಾಚಿ ಕ್ಷಮೆಯಾಚಿಸಿದನಂತೆ. ಭಕ್ತಿ ಚಳುವಳಿಯ ಪುರುಷ ಸಂತರ ಒಡನಾಟದಲ್ಲಿ ಮಹಿಳಾ ಸಂತರು ಲೈಂಗಿಕವಾದ ಶೋಷಣೆಗೆ (ಮೊದಲು ಹೆಸರಿಸಿರುವ 'ಚೆಲ್ಲವಗ್ಗ'ದಲ್ಲಿನ ಘಟನೆಗಳಂತೆ) ಒಳಗಾಗುತ್ತಿದ್ದರೆಂಬುದಕ್ಕೆ ಇಂತಹ ಐತಿಹ್ಯಗಳು ಸಾಕ್ಷಿ.

ದೇಹ ಮತ್ತು ದೇಹಾತೀತ ಅನುಭವಗಳ ಇಂತಹ ತೀವ್ರ ಸಂಘರ್ಷವು ಅಕ್ಕಮಹಾದೇವಿಯ 'ವಿಮೋಚನೆ'ಯ ಹೋರಾಟದಲ್ಲಿ ವ್ಯಕ್ತವಾಗುತ್ತದೆ. ಅಕ್ಕ, ಅವ್ವೆಯಂತೆ ಯೌವ್ವನವನ್ನು ತಿರಸ್ಕರಿಸುವುದಿಲ್ಲ, ಕರಿಕಾಲಮ್ಮೆಯಂತೆ ರೂಪವನ್ನು ತಿರಸ್ಕರಿಸುವುದಿಲ್ಲ. ಬದಲಾಗಿ ಲಾಲ್‌ದೇಡಳಂತೆ ದೇಹವನ್ನು ಮುಂದಿಟ್ಟುಕೊಂಡು ಸಮಾಜವು ಕಲ್ಪಿಸಿದ ಸಂಕೋಲೆಗಳನ್ನು ಧಿಕ್ಕರಿಸಿ, ತನ್ನನ್ನು ನಗ್ನಗೊಳಿಸಿಕೊಂಡು ಸಮಾಜದ ಮುಖಕ್ಕೆ ರಾಚುವಂತೆ ಒಡ್ಡುತ್ತಾಳೆ :

ಬಿಟ್ಟಿಹ ಮೊಲೆಯ, ಭರದ ಜವ್ವನದ ಚೆಲುವ
ಕಂಡು ಬಂದಿರಣ್ಣ
ಅಣ್ಣಾ ನಾನು ಹೆಂಗೂಸಲ್ಲ ಅಣ್ಣಾ ನಾನು
ಸೂಳೆಯಲ್ಲ ಅಣ್ಣಾ ಮತ್ತೆ ನನ್ನ ಕಂಡು ಕಡು

ಆರೆಂದು ಬಂದಿರಣ್ಣಾ
ಚೆನ್ನಮಲ್ಲಿಕಾರ್ಜುನನಲ್ಲದ
ಪರ ಪುರುಷನು ನನಗಾಗದ ಮೋರೆ ನೋಡಣ್ಣ

ಎನ್ನುತ್ತಾಳೆ.

ಅವಳ ನಿಲುವಿನಲ್ಲಿ ಅಡಗಿರುವ ಪ್ರತಿಭಟನೆ ಧಾರ್ಮಿಕ ಕ್ಷೇತ್ರಕ್ಕಷ್ಟೇ ಸೀಮಿತವಾದುದಲ್ಲ. ಪುರುಷ ಪ್ರಧಾನ ಜಗತ್ತಿನ ಮೌಲ್ಯಗಳಿಗೆ ಪ್ರತಿಭಟನೆಯ ಸ್ವರೂಪದ ಚಾರಿತ್ರಿಕ ವಿಸ್ತಾರವನ್ನು ನೀಡುವಂತಹುದ್ದು "ಕಾಯವನು ಅಕಾಯ"ಗೊಳಿಸಿಕೊಳ್ಳುವ (ಮನ ಲಯವಾಗಿತ್ತು... ಭಾವ ಬಯಲಾಯಿತ್ತು... ಕಾಯ ಅಕಾಯವಾಯಿತು) ಅಪೂರ್ವ ಸಾಮಾಜಿಕ ಪ್ರತಿಭಟನೆ ಬಹಳ ಅನುಭಾವಿಕತೆಯ ಬೇರ್ಪಡಿಸಲಾಗದ ಮತ್ತೊಂದು ಮಗ್ಗುಲಾಗಿದೆ. ಅಕ್ಕನಂತೆಯೇ ಲಾಲ್‌ದೇಡ್ ಬತ್ತಲೆಯಾಗಿ ಹಾಡುತ್ತಾ ಕುಣಿಯುತ್ತಾ ಸುತ್ತುತ್ತಾಳೆ. ಹುಚ್ಚಿ ಎಂದು ಅವಹೇಳನ ಮಾಡುವ ಜನತೆಯ ಕುಹಕಗಳಿಗೆ ಕಿವಿಗೊಡದೆ ಭಕ್ತಿಯ ಪಾರಮ್ಯವನ್ನು ಮೆರೆದು ಕಾಶ್ಮೀರಿ ಭಾಷೆಗೆ ಜೀವಧಾತುವನ್ನು ನೀಡಿದವಳು ಅವಳು.

ಅಕ್ಕಮಹಾದೇವಿ ಬತ್ತಲೆಯಾಗಿ, ಸಮಾಜದ ಸಾಂಪ್ರದಾಯಿಕ ಜಗತ್ತಿನೊಂದಿಗೆ ಸಂಘರ್ಷಕ್ಕೆ ಇಳಿಯುವುದು ಧಾರ್ಮಿಕ ಚೌಕಟ್ಟಿನೊಳಗೆಂಬುದು ನಿಜ. ಆದರೆ ಶರಣ ಸಮುದಾಯದಲ್ಲಿ ಅವಳಿಗೆ ದೊರೆತ ಘಟನೆಯ ಸ್ಥಾನಮಾನ ಬಹುಶಃ ಈ ಗುಂಪಿನ ಮತ್ತಾವ ಮಹಿಳಾ ಸಂತಳಿಗೂ ದೊರೆತಂತೆ ಕಾಣದು -

ಕಾಯದ ಲಜ್ಜೆಯ ಕಲ್ಪಿತವ ಕಳೆದು
ಜೀವದ ಲಜ್ಜೆಯ ಮೋಹವನಳಿದು
ಮನದ ಲಜ್ಜೆಯ ನೆನಹ ಸುಟ್ಟು
ಭಾವದ ಕೂಟ ಬತ್ತಲೆಯಿಂದರಿದು
ತವಕದ ಸ್ನೇಹ ವ್ಯವಹಾರಕ್ಕೆ ಹುಗುದು
ಕೂಡಲಸಂಗಮದೇವಯ್ಯ
ಎನ್ನ ಹೆತ್ತ ತಾಯಿ ಮಹಾದೇವಿಯಕ್ಕನ
ನಿಲವ ನೋಡಯ್ಯ ಪ್ರಭುವೆ

ಎನ್ನುವ ಬಸವಣ್ಣನವರ ವಚನ ಮತ್ತು

ಗುಹೇಶ್ವರ ಲಿಂಗದಲ್ಲಿ ಸಂಧಿಲದಿಪ್ಪ
ಮಹಾದೇವಿಯಕ್ಕನ ಶ್ರೀ ಪಾದಕ್ಕೆ
ನಮೋ ನಮೊ ಎಂಬೆನು

ಎನ್ನುವ ಪ್ರಭುದೇವರ ವಚನಗಳು ಅನುಭವ ಮಂಟಪವು ನಿರ್ಮಿಸಿದ ಸಮಾಜೋ ಧಾರ್ಮಿಕ ವಾತಾವರಣದ ಲಿಂಗಪತಿ - ಶರಣಸತಿ ಎಂಬ ಅನುಭಾವಿಕ ನೆಲೆಯಲ್ಲಿ ಅಕ್ಕನಿಗೆ ದೊರೆತ ಬೆಂಬಲವನ್ನು ಸೂಚಿಸುತ್ತದೆ. ಇಂತಹ ಬೆಂಬಲ ಮೀರಾಳಿಗಾಗಲೀ ಅಥವಾ ಅಪಮಾನವನ್ನು ನುಂಗಿಕೊಳ್ಳುತ್ತಾ ತನ್ನ ನೋವನ್ನು ಹಾಡಾಗಿ ಹಾಡುತ್ತಾ ಭಕ್ತಿಪರವಶತೆಯನ್ನು ಮೆರೆದ ಲಾಲ್‌ದೇಡ್‌ಗಳಿಗಾಗಲೀ ದೊರೆತಂತಿಲ್ಲ. ಕರ್ನಾಟಕ ವೀರಶೈವ ಚಳುವಳಿಯ ಶರಣರು ತಳೆದ ನಿಲುವನ್ನು ಮಹಾರಾಷ್ಟ್ರದ ಚೋಖಮೇಳ, ತುಕಾರಾಂ ಮತ್ತು ಏಕನಾಥರಂತಹ ಪ್ರಖ್ಯಾತ ಸಂತರು ತಳೆದಿದ್ದ ಸಾಂಪ್ರದಾಯಿಕ ನಿಲುವಿನೊಂದಿಗೆ ಹೋಲಿಸಿದರೆ ಅನುಭವ ಮಂಟಪದ ಮುಕ್ತ ವಾತಾವರಣವು ಮಹಿಳೆಯ ದೃಷ್ಟಿಯಿಂದ ಅಪೂರ್ವವೂ ಅನನ್ಯವೂ ಆಗಿತ್ತೆಂಬುದರಲ್ಲಿ ಉತ್ಪ್ರೇಕ್ಷೆ ಏನೂ ಇರದು.

ಭಕ್ತಿ ಚಳುವಳಿಗಳು ಸ್ತ್ರೀ ಪ್ರಧಾನ ಭೂಮಿಕೆಯನ್ನು ಒಪ್ಪಿಕೊಂಡವಾದರೂ ಆಧುನಿಕ ಅರ್ಥದಲ್ಲಿ ಇವು ಮಹಿಳಾ-ಪರ ಸುಭದ್ರ ಸೈದ್ಧಾಂತಿಕ ಚೌಕಟ್ಟನ್ನು ಒದಗಿಸುತ್ತವೆ ಎನ್ನುವಂತಿಲ್ಲ. ಒಂದು ಕಾಲಘಟ್ಟದ ಸಮಾಜದಲ್ಲಿನ ಬೆಳವಣಿಗೆಗಳಲ್ಲಿ ಅನಿಷ್ಟಗಳಿದ್ದರೂ ಅವು ಆ ಘಟ್ಟದಲ್ಲಿ ಅನಿಷ್ಟಗಳಾಗಿ ತೋರದಿರಬಹುದು ಅಥವಾ ಆ ಅನಿಷ್ಟಗಳು ಬಗೆಹರಿಸಿಕೊಳ್ಳಬೇಕಾದವು ಎನ್ನುವ ಗಂಭೀರ ಚಿಂತನೆಗೆ ಒಳಗು ಮಾಡುವಂತಹ ಸಮಸ್ಯೆಗಳಾಗದೇ ಇರಬಹುದು. ಆದ್ದರಿಂದ ನಮ್ಮ ಕಾಲಕ್ಕೆ ಸಾಮಾಜಿಕ ಸಮಸ್ಯೆಗಳಾಗಿ ಕಾಡುವಂತಹವು. ಚರಿತ್ರೆಯ ಹಿಂದಿನ ಕಾಲಘಟ್ಟವೊಂದರಲ್ಲಿ ಕಾಡುವ ಸಮಸ್ಯೆಗಳಾಗಿಲ್ಲದಿರಬಹುದು. ಆದ್ದರಿಂದಲೇ ಭಕ್ತಿ ಚಳುವಳಿಯಲ್ಲಿ ಅಚ್ಚಳಿಯದ ಸ್ಥಾನವನ್ನೂ ಕೊಡುಗೆಯನ್ನೂ ಸಾಧ್ಯವಾಗಿಸಿಕೊಂಡ ಮಹಿಳಾ ಸಂತರು ಸಮಾಜದ ಇನ್ನಿತರ ಕ್ಷೇತ್ರಗಳಲ್ಲಿ ಮಹಿಳೆಯ ಸಮಸ್ಯೆಯನ್ನು ನೋಡಲಾಗಲಿಲ್ಲ ಎನ್ನಲೂ ಬಹುದು.

ಸ್ತ್ರೀವಾದಿ ಚಳುವಳಿಯು ವರ್ಗವ್ಯವಸ್ಥೆ ಎಂಬ ಸೈದ್ಧಾಂತಿಕ ಪರಿಕಲ್ಪನೆಯಂತೆ ಪಶ್ಚಿಮದಿಂದ ಬಂದದ್ದು. ಈ ಅರ್ಥದಲ್ಲಿ ಪ್ರತ್ಯೇಕ ಸಂಘಟನೆಯಾಗಿ ಅದು ಈ ಚಳುವಳಿಯಲ್ಲಿ ಯಾವ ಪಾತ್ರವನ್ನು ವಹಿಸಬಹುದಾಗಿತ್ತು ಎನ್ನುವುದು ನಮ್ಮ ಊಹಾ ಪ್ರಪಂಚಕ್ಕೆ ಬಿಟ್ಟ ವಿಷಯ. ಆದರೆ ಭಕ್ತಿ ಚಳುವಳಿಯೆಂಬ ಸಾಗರದ ನಡುವೆ ಅಲ್ಲಲ್ಲಿ ಹರಡಿದ ಪ್ರತಿಭಟನೆಯ ನಡುಗಡ್ಡೆಗಳಂತೆ ಪುರುಷ ಪ್ರಧಾನ ಮೌಲ್ಯಗಳನ್ನು ವಿರೋಧಿಸುವ ಈ ಸಂತ ಮಹಿಳೆಯರು ಕಾಣಿಸಿಕೊಳ್ಳುತ್ತಾರೆ.

ಇಂತಹ ಪ್ರತಿಭಟನೆಯನ್ನು ಕಾಣಬೇಕಾದರೂ ಈ ದೇಶ ಅದೆಷ್ಟು ಶತಮಾನಗಳು ಕಾಯಬೇಕಾಯಿತು !

---

**(1995ರ ಜನವರಿ 14-15ರಂದು ಕರ್ನಾಟಕ ಸಾಹಿತ್ಯ ಅಕಾಡೆಮಿ ಆಶ್ರಯದಲ್ಲಿ ಚಿತ್ರದುರ್ಗದಲಿ ನಡೆದ ವಿಚಾರ ಸಂಕಿರಣದಲ್ಲಿ ಮಂಡಿಸಿದ ಪ್ರಬಂಧ)**

# ನೋವಿನಲ್ಲೂ ಅರಳಿದ ಕುಸುಮಗಳು




**ಮರಳುಗಾಡಿನ ಕುಸುಮಗಳು**

(ವಿವಿಧ ಮಹಿಳೆಯರ ಆತ್ಮವೃತ್ತಾಂತಗಳು)

ಅನುವಾದ : **ಭಾರತಿ ಮೋಹನ ಕೋಟಿ**

ಪ್ರಕಾಶನ : **ಶಿಲ್ಪಾ ಪ್ರಕಾಶನ**, ಗದಗ

ಪುಟಗಳು 138 ಬೆಲೆ ರೂ. 50/-

ಮೊದಲ ಮುದ್ರಣ ಡಿಸೆಂಬರ್ 2002

ಶ್ರೀಮತಿ ಭಾರತಿ ಮೋಹನ ಕೋಟಿಯವರು ಸಂಗ್ರಹಿಸಿದ ಅನುವಾದ 'ಮರಳುಗಾಡಿನ ಕುಸುಮ'ವು ವೈಯಕ್ತಿಕ ಹೋರಾಟದ ಬದುಕಿನ ಏಳು ದಿಟ್ಟೆಯರ ರೋಮಾಂಚಕ ಕಥೆಗಳ ಸಂಗ್ರಹ. ಭಾರತೀಯ ಹೆಣ್ಣಿನ ಅನುಭವ ವಲಯಕ್ಕೆ ಹೊಸದೊಂದು ಲೋಕವನ್ನೇ ತೆರೆಸುವ ಈ ಸಂಕಲನದ ಹೆಣ್ಣುಗಳೆಲ್ಲ ಉಸಿರಾಡುತ್ತಿರುವಂತೆ ಭಾಸವಾಗುವುದು ಈ ಕೃತಿಯ ವೈಶಿಷ್ಟ್ಯತೆ.

ಈ ಸಂಕಲನದಲ್ಲಿ ದೈಹಿಕ ವಿಕಲತೆಗೆ ಒಳಗಾದ ಸಾಮಾಜಿಕ ಅನ್ಯಾಯದಿಂದ ಘಾಸಿಗೊಳಗಾದ ಹೆಣ್ಣುಗಳು ಹೇಗೆ ಪರಿಸ್ಥಿತಿಯ ಎಲ್ಲ ವೈಪರೀತ್ಯಗಳನ್ನು ಗೆದ್ದು ಅರಳಿ ಮೇಲೇಳುವ ಕಥೆ ಮನನೀಯವಾಗಿದೆ.

ತನ್ನದಲ್ಲದ ತಪ್ಪಿನಿಂದಾಗಿ ಏಡ್ಸ್ ರೋಗಕ್ಕೆ ಬಲಿಯಾದ ಎಂಟು ವರ್ಷದ ಪುಟ್ಟ ಮಗು ಸಾವಿನೆಡೆಗೆ ಸರಿದು ಹೋಗುವುದನ್ನು ಅಸಹಾಯಕವಾಗಿ ನೋಡುತ್ತ ಕುಳಿತುಕೊಳ್ಳುವ ದುರ್ಭರ ಪರಿಸ್ಥಿತಿ ಯಾವ ತಂದೆ ತಾಯಿಗಳಿಗೂ ಬರಬಾರದು. ಹಾಗೆ ತನ್ನ ಮಗು 'ಬೆನ್'ನ ಸಾವನ್ನು ನಿರೀಕ್ಷಿಸುತ್ತಾ, ತನ್ನ ಕಣ್ಣೀರನ್ನು ಅದುಮಿ ಹಿಡಿದು ಸಾವಿನ ಭಯಾನಕತೆ ಅವನಿಗೆ ತಟ್ಟದಂತೆ ಸಾವನ್ನು ಸಹಜವಾಗಿ ಸ್ವೀಕರಿಸಲು ಅವನನ್ನು ಮಾನಸಿಕವಾಗಿ ಸಿದ್ಧಗೊಳಿಸಿದ ಮಹಾತಾಯಿ ಕ್ರಿಸ್ ಆಯಿಲರ್‌ಳ ಕರುಣ ಕಥೆ ಬೆನ್ ಬೆಳಕು.

ರೊಸಾನ್ನಾ ಬೆಂರಿಝ ಎಂಬ ಹದಿನಾಲ್ಕು ವರ್ಷದ ಬಾಲೆ 1962ರಲ್ಲಿ ಪೋಲಿಯೋ ಪೀಡಿತಳಾದಳು. ಆ ವಯಸ್ಸಿನಿಂದ ಅವಳು ಇಟಲಿಯ ಜಿನೋವಾ ನಗರದ ಆಸ್ಪತ್ರೆಯೊಂದರಲ್ಲಿ 'ಆರ್ಯನ್ ಲಂಗ್' (Iron Lung) ಎಂಬ ಪೆಟ್ಟಿಗೆಯಲ್ಲಿ ಬಂಧಿತಳಾಗಿ ಜೀವಿಸಿದಳು. ನಿರಾಶೆ, ಕಹಿಯನ್ನೆಲ್ಲ ಹಿಮ್ಮೆಟ್ಟಿಸಿ ರಚನಾತ್ಮಕ ಬದುಕನ್ನು ಕಟ್ಟಿಕೊಂಡ ಅವಳ ಶೌರ್ಯಪತಾಕೆಯು ಇಟಲಿಯ ಅಂಗವಿಕಲರನ್ನೆಲ್ಲ ಒಟ್ಟುಗೂಡಿಸುವಲ್ಲಿ ನಾಂದಿ ಹಾಡಿತು.

ಗಿಲ್ಲೇನ್ ಬಾರ್ (Gillain Barre) ಎಂಬ ವಿಚಿತ್ರ ರೋಗಕ್ಕೆ ತುತ್ತಾದ ನತದೃಷ್ಟ ಹೆಣ್ಣು 'ಸ್ಯೂಬೇಯರ್'. ಊಟ, ತಿಂಡಿ, ನೀರು ಹೋಗಲಿ ಮಾತನಾಡಲು ಆಗದಂಥ ಸ್ಥಿತಿಗೆ ತಲುಪಿಯೂ ಕಣ್ಣುರೆಪ್ಪೆಯ ಚಲನೆಯ ಮೂಲಕವೇ ಸಂಭಾಷಣೆ ನಡೆಸಿ ಜೀವನವನ್ನೆದುರಿಸಿದ ಈಕೆಯ ಆತ್ಮವಿಶ್ವಾಸ ಯಾರನ್ನೂ ಬೆರಗುಗೊಳಿಸುವಂಥದ್ದು. ಇಡೀ ಶರೀರ ದುರ್ಬಲಗೊಂಡು ಕೇವಲ 'ಬೆಡ್ ನಂ. ಟೆನ್' ಎನಿಸಿಕೊಂಡು ಹಾಸಿಗೆಯಲ್ಲಿ ಬಿದ್ದಿದ್ದ ಸ್ಯೂಬೇಯರ್ ಗುಣಮುಖವಾಗಿ ಮನೆಗೆ ಹಿಂದಿರುಗುವ ಹೃದಯಂಗಮ ಕಥೆ ಬೆಡ್ ನಂ. ಟೆನ್.

ಜ್ಯೂಡಿ ಟೇಲರ್ ಒಂಬತ್ತು ವರ್ಷದವಳಿರುವಾಗ ನಿಧಾನವಾಗಿ ಅಂಧಕಾರ ಅವಳನ್ನಾವರಿಸುತ್ತ ಬಂದಿತು. ಅವಳ ದೃಷ್ಟಿಯನ್ನುಳಿಸಲು ಯಾವುದೇ ದಾರಿಯಿಲ್ಲ ಎಂದು ವೈದ್ಯರು ಹೇಳಿದಾಗ್ಯೂ ಎದೆಗುಂದದೆ ಸಹಜ ಜೀವನ ನಡೆಸಬೇಕೆಂದು ಜ್ಯೂಡಿ ಟೇಲರ್ ನಿರ್ಧರಿಸುತ್ತಾಳೆ. ಈ ದಿಟ್ಟ ನಿರ್ಧಾರದಿಂದ ಬದುಕನ್ನೆದುರಿಸುವ ಮದುವೆಯಾಗಿ ಪತಿಯ ಪ್ರೀತಿಯನ್ನು ಸಂಪಾದಿಸಿ ಅದರೊಂದಿಗೆ ತನ್ನ ದೃಷ್ಟಿಯನ್ನು ಹಿಂದಕ್ಕೆ ಪಡೆಯುವ ಅಂತಃಕರಣ ಕಲಕುವ ಕಥೆ 'ತಮಸೋ ಮಾ ಜ್ಯೋತಿರ್ಗಮಯ'

ತೂಗು ಹಗ್ಗದ ಮೇಲೆ ನಡೆಯುವ ಸಾಧನೆ ಮಾಡಿದ ಏಂಜೆಲ್ ವ್ಯಾಲ್ಲೆಂಡಾ ಅದಕ್ಕೆ ಅಗತ್ಯವಾದ ಚಳಕ, ಚುರುಕುತನ, ಶಕ್ತಿ ತಾಕತ್ತು ಪಡೆಯಲು ಗಂಟೆಗಟ್ಟಲು ತಾಲೀಮು ಮಾಡುತ್ತಿದ್ದಳು. 21ರ ಹರೆಯದಲ್ಲಿದ್ದಾಗ ಕ್ಯಾನ್ಸರ್‌ನಿಂದ ಮೂರು ವರ್ಷದಲ್ಲಿ ನಾಲ್ಕು ಬಾರಿ ಶಸ್ತ್ರ ಚಿಕಿತ್ಸೆಗೆ ಒಳಗಾಗಿ ಕೃತಕ ಕಾಲಿನಲ್ಲಿ ಹಗ್ಗದ ಮೇಲೆ ನಡೆದು ಪ್ರದರ್ಶಿಸಿದ ಆತ್ಮಬಲದ ಕಥೆ ಹಗ್ಗದ ಮೇಲಣ ಬದುಕು.

'ಮರಳುಗಾಡಿನ ಕುಸುಮ' ಒಂದು ವಿಶಿಷ್ಟ ಬಗೆಯ ಆತ್ಮ ಕಥನ. ಆಫ್ರಿಕಾದ ಬುಡಕಟ್ಟು ಜನಾಂಗಗಳಲ್ಲಿ ಇಂದಿಗೂ ಆಚರಣೆಯಲ್ಲಿರುವ ಸ್ತ್ರೀ ಸುನ್ನತಿಯ ಬರ್ಬರ ಸಂಪ್ರದಾಯದ ವಿರುದ್ಧ ಹೋರಾಡಿದ ಸೋಮಾಲಿಯಾದ ಹೆಣ್ಣು ಮಗಳು ವಾರಿಸ್ ಡೇರಿಯ ಆತ್ಮ ವೃತ್ತಾಂತ. ಸೋಮಾ ದನಗಾಹಿ ಕುಟುಂಬದಿಂದ ಬಂದ ಈ ಹೆಣ್ಣುಮಗಳು ತಾರುಣ್ಯದ ಬದುಕಿನಲ್ಲಿ ಅನೇಕ ಸಂಕಷ್ಟಗಳನ್ನು ಅನುಭವಿಸಿ ಮಾಡೆಲಿಂಗ್ ರಂಗ ಪ್ರವೇಶಿಸಿದ ಜೀವನ ವೃತ್ತಾಂತದ ಅತ್ಯಂತ ರೋಚಕ ಕಥೆ 'ಮರಳುಗಾಡಿನ ಕುಸುಮ'.

ಕ್ಯಾನ್ಸರ್ ರೋಗದೊಡನೆ ಸೆಣಸುತ್ತಲೇ ಕ್ಯಾನ್ಸರ್ ರೋಗಿಗಳ ಹಿತ ಚಿಂತನೆಗೈದ ವಿಕ್ಕಿ 'BACUP' ಸಂಸ್ಥೆಯನ್ನು ರೂಪಿಸಿದ ಸಾಹಸಿ. ಸಾವನ್ನು ಪ್ರತಿಕ್ಷಣ ಅನುಭವಿಸುತ್ತಿದ್ದರೂ ಅಪೂರ್ವ ಜೀವನೋತ್ಸಾಹದಿಂದ ಅಕ್ಷರಶಃ ತನ್ನ ಕೊನೆಯುಸಿರಿರುವವರೆಗೂ ಕ್ಯಾನ್ಸರ್ ರೋಗದ ವಿರುದ್ಧ ಹೋರಾಡಿದ 'ವಿಕ್ಕಿ' ಮಹಿಳೆಯರ ಆತ್ಮ ಸ್ಥೈರ್ಯದ ಘನೀಕೃತ ರೂಪ.

ಇದೊಂದು ವಿಶಿಷ್ಟ ಅನುಭವ ನೀಡುವ ವಿಶಿಷ್ಟ ಕೃತಿ. ನೋವಿಗದ್ದಿದ ಹೆಂಗಳೆಯರ ಅನುಭವಗಳನ್ನು ಕನ್ನಡದಲ್ಲಿ ಅನುವಾದ ಮಾಡಿಕೊಡುವ ಮೂಲಕ ಶ್ರೀಮತಿ ಭಾರತಿ ಕೋಟೆಯವರು ಮಹಿಳಾ ಆತ್ಮಕಥಾನಕ ಪರಂಪರೆಗೆ ಹೊಸ ಎಳೆಯನ್ನು ಸೇರಿಸಿದ್ದಾರೆ. ಅವರೇ ಹೇಳಿಕೊಂಡಂತೆ ''ನಮ್ಮ ನಾಡಿನಲ್ಲಿ ಇಂಥ ನೂರಾರು ಹತಭಾಗಿನಿಯರಿರಬಹುದು. ಅದೃಷ್ಟ ವಂಚಿತೆಯರಿರಬಹುದು. ಆದರೆ ಆ ಅದೃಷ್ಟದ ತಲೆ ತುರುಬನ್ನು ಹಿಡಿದು ತಮಗೆ ಬೇಕಾದಂತೆ ಬಗ್ಗಿಸಿಕೊಳ್ಳಬಲ್ಲ ಆತ್ಮಶಕ್ತಿ ? ಅಂಥದೊಂದು ಚಿಕ್ಕ ಪ್ರೇರಣೆಯನ್ನು ಇಲ್ಲಿರುವ ಲೇಖನಗಳು ನಮ್ಮ ಮಹಿಳೆಯರಲ್ಲಿ ಉಂಟು ಮಾಡಿದರೆ ನನ್ನ ಶ್ರಮ ಸಾರ್ಥಕ.'' ಎಂಬ ಮಾತುಗಳು ಇಡೀ ಕೃತಿಯ ಔಚಿತ್ಯ ಕುರಿತ ಮಾತಾಗುತ್ತದೆ.

★

## ಕರ್ನಾಟಕದಲ್ಲಿ ಮಹಿಳಾ ವಿಶ್ವವಿದ್ಯಾಲಯ

ಕರ್ನಾಟಕದ ಮಾನ್ಯ ಮುಖ್ಯಮಂತ್ರಿಗಳು ಬಜೆಟ್ ಮಂಡಿಸಿದಾಗ ಬಿಜಾಪುರದಲ್ಲಿ ಮಹಿಳಾ ವಿಶ್ವವಿದ್ಯಾಲಯವನ್ನು ಸ್ಥಾಪಿಸುವ ಪ್ರಸ್ತಾವನೆಯನ್ನು ಮಂಡಿಸಿದ್ದರು. ಕಳೆದ ತಿಂಗಳು ಶಿಕ್ಷಣಾಧಿಕಾರಿಗಳು ಧುತ್ತೆಂದು ಜೂನ್ 15ರಿಂದ ಬಿಜಾಪುರದಲ್ಲಿ ಮಹಿಳಾ ವಿಶ್ವವಿದ್ಯಾಲಯವನ್ನು ಆರಂಭಿಸುವ ಪ್ರಕಟಣೆ ಹೊರಡಿಸಿದ್ದೇ ತಡ ಪತ್ರಿಕೆಗಳಲ್ಲಿ ಮಹಿಳಾ ವಿಶ್ವವಿದ್ಯಾಲಯ ಸುದ್ದಿ ಮಾಡಿತು. ವಿಶೇಷ ಚರ್ಚೆ ನಡೆಯಿತು. ಈ ಚರ್ಚೆಯ ಮುಖ್ಯ ಜೀವಾಳ ವಿಶ್ವವಿದ್ಯಾಲಯಕ್ಕೆ ಏನು ಹೆಸರಿಡಬೇಕೆಂಬುದೇ ಆಗಿತ್ತು. ಸೋನಿಯಾ ಗಾಂಧಿ, ಅಕ್ಕಮಹಾದೇವಿ, ಕಿತ್ತೂರು ಚೆನ್ನಮ್ಮ... ಹೀಗೆ ನಾಮಕರಣ ಮಹೋತ್ಸವದ ಬಗೆಗೇ ತಲೆಕೆಡಿಸಿಕೊಂಡಿದ್ದ ನಮ್ಮ ಬಹಳಷ್ಟು ಮಂದಿಗೆ ಈ ವಿಶ್ವವಿದ್ಯಾಲಯ ಏನು ಮಾಡುತ್ತದೆ? ಏನು ಮಾಡಬೇಕು? ಎಂಬುದರ ಬಗ್ಗೆ ತಲೆ ಬಿಸಿಯಾದಂತೆ ಕಾಣುವುದಿಲ್ಲ. ಪತ್ರಿಕೆಯಲ್ಲಿ ಪ್ರಕಟವಾಗಿದ್ದ ಸುದ್ದಿಯಲ್ಲಿ ಫ್ಯಾಷನ್ ಡಿಸೈನಿಂಗ್, ಹೋಂಸೈನ್ಸ್ ಮುಂದಾದ ವಿಶೇಷ ಅಧ್ಯಯನಗಳನ್ನು ಇಲ್ಲಿನ ಪಠ್ಯಕ್ರಮದಲ್ಲಿ ಅಳವಡಿಸಲಾಗುವುದು ಎಂದಿತ್ತು.

ವಿಶ್ವವಿದ್ಯಾನಿಲಯದಂತಹ ಗಂಭೀರ ವಿಷಯಗಳ ಬಗ್ಗೆ ವ್ಯಾಪಕ ಚರ್ಚೆ, ಸಲಹೆ ಮತ್ತು ಪೂರ್ವ ಸಿದ್ಧತೆಯಿಲ್ಲದೆ ಸಂಸ್ಥೆಯನ್ನು ಆರಂಭಿಸುವುದು ಚುನಾವಣೆಗೆ ಪೂರ್ವಭಾವಿಯಾದ ಪ್ರಚಾರವೇ? ಎಂಬ ಅನುಮಾನ ಎಲ್ಲರಲ್ಲೂ ಹುಟ್ಟುತ್ತಿದೆ. ಕಾಂಗ್ರೆಸ್ ಸರ್ಕಾರ ತಾನು ನೇಮಿಸಿದ ಮಹಿಳಾ ಟಾಸ್ಕ್ ಫೋರ್ಸ್ ಮತ್ತು ಮಹಿಳಾ ಆಯೋಗವನ್ನು ಎಷ್ಟು ಗಂಭೀರವಾಗಿ ಪರಿಗಣಿಸಿತು, ಎಂದು ನೋಡಿದಾಗ ಈ ವಿಶ್ವವಿದ್ಯಾಲಯವೂ ಆ ಪಟ್ಟಿಗೆ ಸೇರಬಹುದಲ್ಲವೇ? ಎಂಬ ಆತಂಕ ಸ್ತ್ರೀವಾದಿಗಳಿಗೆ ಹುಟ್ಟಿದೆ.

ಹೋರಾಟಕ್ಕಾಗಿ ಬೀದಿಗಿಳಿದ ಮಹಿಳೆಯರನ್ನು ಕುರಿತು 'ಮನೆಗೆ ಹಿಂತಿರುಗಿ. ಸಿಂಗಾರ ಮಾಡಿಕೊಂಡು ಗಂಡನನ್ನು ಒಲಿಸಿಕೊಂಡು ಅವನು ದುಶ್ಚಟಗಳ ದಾಸನಾಗದಂತೆ ನೋಡಿಕೊಳ್ಳಿ' ಎಂದು ಹಿತವಚನ ನೀಡಿರುವ ಮುಖ್ಯ ಮಂತ್ರಿಗಳು ಮಹಿಳಾ ವಿಶ್ವವಿದ್ಯಾಲಯವನ್ನು ಹೇಗೆ ರೂಪಿಸಬಹುದೆಂಬುದನ್ನು ಕಾದು ನೋಡಬೇಕಾಗಿದೆ.

# ವೇಲ್ಸ್ ಮಹಿಳೆಯರ ಅನುಭವ

**ಕಲ್ಪನಾ ಶರ್ಮ**

ವೇಲ್ಸ್‌ನಲ್ಲಿ ಆಗಬಹುದಾದರೆ ಭಾರತದಲ್ಲಿ ಏಕೆ ಸಾಧ್ಯವಿಲ್ಲ? ಇದು ಆ ಎರಡು ದೇಶಗಳ ಗಾತ್ರಗಳ ನಡುವಿನ ವ್ಯತ್ಯಾಸವಲ್ಲ, ಆ ದೇಶಗಳ ಜನರಿಗಿರುವ ಆಸಕ್ತಿ ಮತ್ತು ಸಂಕಲ್ಪಶಕ್ತಿಯ ನಡುವಿನ ವ್ಯತ್ಯಾಸ. ಅತ್ಯಂತ ಪ್ರಗತಿಪರವೆಂದು ಕರೆಸಿಕೊಳ್ಳುವ ಸ್ವೀಡನ್ ದೇಶವು ಸಾಧಿಸದೇ ಹೋದದ್ದನ್ನು ಈಗ ವೇಲ್ಸ್ ಅಸೆಂಬ್ಲಿ ಸಾಧಿಸಿದೆ. ಇತ್ತೀಚಿನ ವೇಲ್ಸ್ ಅಸೆಂಬ್ಲಿಯ ಚುನಾವಣೆಗಳಲ್ಲಿ ಗೆದ್ದವರ ಸಂಖ್ಯೆಯಲ್ಲಿ ಸಮವಾಗಿ ಸ್ತ್ರೀಯರು ಮತ್ತು ಪುರುಷರು ಮೂವತ್ತು.

ಭಾರತದಲ್ಲಿ ಇತ್ತೀಚೆಗೆ ಪಾರ್ಲಿಮೆಂಟಿನಲ್ಲಿ ಮಹಿಳಾ ಮೀಸಲಾತಿಗೆ ಒದಗಿ ಬಂದ ದುರವಸ್ಥೆಯ ಹಿನ್ನೆಲೆಯಲ್ಲಿ ವೇಲ್ಸ್‌ನ ಚುನಾವಣೆಯ ಫಲಿತಾಂಶಕ್ಕೆ ಅರ್ಥವಿದೆ. ವೇಲ್ಸ್‌ನ ಚುನಾವಣೆಯ ಕಥೆ ಕುತೂಹಲಕಾರಿಯಷ್ಟೇ ಅಲ್ಲ ಮಾರ್ಗದರ್ಶಿಯೂ ಆಗಿದೆ. ಭಾರತದಂತೆ ವೇಲ್ಸ್‌ನಲ್ಲಿಯೂ ರಾಜಕೀಯ ವ್ಯವಸ್ಥೆಯಲ್ಲಿ ಮಹಿಳೆಯರ ಪ್ರಾತಿನಿಧ್ಯ ಹೆಚ್ಚಾಗಬೇಕೆಂಬ ವಿಚಾರವನ್ನು ಅಲ್ಲಿನ ಮಹಿಳೆಯರೂ ಪ್ರತಿಪಾದಿಸಿ ಹೋರಾಟ ನಡೆಸುತ್ತಲೇ ಬಂದಿದ್ದಾರೆ. 1997ರವರೆಗೂ ಕೇವಲ ನಾಲ್ಕು ಮಹಿಳೆಯರು ಮಾತ್ರ ವೇಲ್ಸ್ ಸರ್ಕಾರದಲ್ಲಿ ಚುನಾಯಿತರಾಗಿದ್ದರು. ಅದಾದ ಆರು ವರ್ಷಗಳಲ್ಲಿ ಆ ಸರ್ಕಾರದಲ್ಲಿ ಎಂತಹ ನಾಟಕೀಯ ತಿರುವು ಒದಗಿ ಬಂತೆಂಬುದನ್ನು ಕಾಣಬಹುದು.

1997ರ ಚುನಾವಣೆಗಳಲ್ಲಿ ಲೇಬರ್ ಪಕ್ಷವು ಅಳವಡಿಸಿದ ನೀತಿಯನ್ನು ಅಲ್ಲಿನ ಮಹಿಳಾಪರ ಸಂಘಟನೆಗಳು ಒಪ್ಪಲಿಲ್ಲ. ಅವರು ಹೊಸ ಸೂತ್ರವೊಂದನ್ನು ಮಂಡಿಸಿದರು. ಎಲ್ಲ ಮತಕ್ಷೇತ್ರಗಳ ಅಭ್ಯರ್ಥಿಗಳನ್ನು ಸ್ತ್ರೀಪುರುಷರ 50:50 ಪ್ರಮಾಣದಂತೆ ಆಯ್ಕೆ ಮಾಡಲಾಯಿತು. ಆದರೆ ಈ ಸೂತ್ರಕ್ಕೂ ಅಲ್ಲಿನ ಪುರುಷವರ್ಗ ಭಾರಿ ಪ್ರತಿರೋಧವನ್ನೇ ಒಡ್ಡಿದರು. ಚುನಾವಣೆಯಲ್ಲಿ ಸ್ಪರ್ಧಿಸುವುದು ತಮ್ಮ ಜನ್ಮಸಿದ್ಧ ಹಕ್ಕು ಎಂದು ಭಾವಿಸಿದ ವೇಲ್ಸ್‌ನ ಪುರುಷರು ಭಾರತದ ಪುರುಷರಿಗಿಂತ ಭಿನ್ನವಾಗೇನೂ ವರ್ತಿಸಲಿಲ್ಲ. 1997ರಲ್ಲಿ ನಡೆದ ಲೇಬರ್ ಪಕ್ಷದ ವಾರ್ಷಿಕ ಅಧಿವೇಶನದಲಿ ಅಂತೂ ಕೊನೆಗೆ ಅತ್ಯಂತ ಕಡಿಮೆ ಮತಗಳ ಅಂತರದಲ್ಲಿ ಈ ಸೂತ್ರಕ್ಕೆ ಅಂಗೀಕಾರ ಮುದ್ರೆ ಬಿತ್ತು.

1999ರಲ್ಲಿ ವೇಲ್ಸ್ ಅಸೆಂಬ್ಲಿಗೆ ನಡೆದ ಚುನಾವಣೆಯಲ್ಲಿ ಲೇಬರ್ ಪಕ್ಷದ ಶೇಕಡ 42ರಷ್ಟು ಮಂದಿ ಮಹಿಳೆಯರು ಸ್ಪರ್ಧಿಸಿದ್ದರು. ಆ ನಂತರ ಎಲ್ಲ ಪಕ್ಷಗಳೂ ಲೇಬರ್ ಪಕ್ಷದ ನೀತಿಯನ್ನೇ ಅನುಸರಿಸಿದವು. ಇತ್ತೀಚಿನ ಚುನಾವಣೆಗಳಲ್ಲಂತೂ ಅಧಿಕಾರಕ್ಕೆ ಬಂದ ಲೇಬರ್ ಪಕ್ಷದಲ್ಲಿ ಆಯ್ಕೆಯಾದವರಲ್ಲಿ ಪುರುಷರಿಗಿಂತ ಮಹಿಳೆಯರೇ ಹೆಚ್ಚು 19 ಮಂದಿ ಮಹಿಳೆಯರಾದರೆ 11 ಮಂದಿ ಪುರಷರು. ಹಾಗೆಯೇ ಕ್ಯಾಬಿನೆಟ್‌ನಲ್ಲಿಯೂ ಒಂಬತ್ತು ಮಂದಿ ಸದಸ್ಯರಲ್ಲಿ ಐವರು ಮಹಿಳೆಯರು.

ರಾಜಕೀಯದಲ್ಲಿ ಮಹಿಳೆಯರ ಪ್ರಾತಿನಿಧ್ಯ ಹೆಚ್ಚಿರಬೇಕೆಂಬ ಉದ್ದೇಶಕ್ಕಾಗಿ ಹೋರಾಡುತ್ತಿದ್ದ ಕ್ಯಾಥರೀನ್ ರೇಕ್ ಗಾರ್ಡಿಯನ್ ಪತ್ರಿಕೆಗೆ ನೀಡಿದ ಸಂದರ್ಶನದಲ್ಲಿ ಹೀಗೆ ನುಡಿದಿದ್ದಾರೆ : "ನೀವು ರಾಜಕೀಯದಲ್ಲಿ ರಚನಾತ್ಮಕ ಬದಲಾವಣೆಯನ್ನು ತರಲು ಕಂಕಣಬದ್ಧರಾದರೆ ರಾಜಕೀಯ ನಕಾಶೆಯನ್ನೇ ಬದಲಾಯಿಸಬಹುದು. ಈಗ ವೇಲ್ಸ್‌ನಲ್ಲಿ ಮಹಿಳಾ ಪ್ರಾತಿನಿಧ್ಯವೆಂಬುದು ಒಪ್ಪಿತ ಪ್ರಯೋಗವಾಗಿದೆ. ಸ್ವಚ್ಛ ಹಲಗೆಯ ಮೇಲೆ ಹೊಸದಾಗಿ ಬರೆದಂತಹ ಅನುಭವವು ಒಂದು ಹೊಸ ಬದಲಾವಣೆಯಾಗಿದೆ.

ಆದರೆ ಭಾರತದ ಅನುಭವವೇ ಬೇರೆಯಾಗಿದೆ. ಪಾರ್ಲಿಮೆಂಟಿನಲ್ಲಿ ಇಂತಹ ಬದಲಾವಣೆಯನ್ನು ತರುವುದು ಅಸಾಧ್ಯವೇನೋ ಎಂಬಂತಹ ಸ್ಥಿತಿ ಒದಗಿದೆ. ವೇಲ್ಸ್‌ನಂತೆಯೇ ಇಲ್ಲಿಯೂ ಗ್ರಾಮ ಪಂಚಾಯಿತಿಯ ಹಂತದಲ್ಲಿ ಮೀಸಲಾತಿಯ ಫಲಶ್ರುತಿಯು ಮೆಚ್ಚುವಂತಹುದಾಗಿದೆ. ಪಂಚಾಯತಿಗಳಿಗಿರುವ ಅಧಿಕಾರ, ಹಣದ ವಹಿವಾಟು ತುಂಬ ಸೀಮಿತವಾದ್ದರಿಂದ ಪುರುಷವರ್ಗ ಅಷ್ಟೊಂದು ತಲೆ ಕೆಡಿಸಿಕೊಳ್ಳಲಿಲ್ಲ. ಆದ್ದರಿಂದ ಮಹಿಳೆಯರಿಗೆ ಮೂರನೆ ಒಂದು ಭಾಗದ ಸೀಟುಗಳನ್ನು ಪಡೆಯುವುದು ಅಷ್ಟೊಂದು ಕಷ್ಟವಾಗಲಿಲ್ಲ. ಆದರೆ ಈ ವ್ಯವಸ್ಥೆಯಲ್ಲಿಯೂ ಮೀಸಲಾತಿಯನ್ನು ಜಾರಿಗೊಳಿಸಿರದೆ ವ್ಯಾಪಕ ಚರ್ಚೆಗೆ ತೊಡಗಿದ್ದಿದ್ದರೆ ಆಗಲೂ ಇದಕ್ಕೆ ವಿರೋಧ ಇದ್ದೇ ಇರುತ್ತಿತ್ತು. ಇಂದಿಗೂ ಮೀಸಲಾತಿಯಿದ್ದೂ ಚುನಾವಣೆಯಲ್ಲಿ ಗೆದ್ದು ಬರುವ ಮಹಿಳೆಯರಿಗೆ ಅವರ ಪುರುಷ ಸಂಗಾತಿಗಳೊಂದಿಗೆ ಕೆಲಸ ಮಾಡುವುದು ಸವಾಲಿನ ವಿಷಯವೇ ಸರಿ.

ಈ ಹಿನ್ನೆಲೆಯಲ್ಲಿ ಇತ್ತೀಚೆಗೆ ಸಂಸತ್ತಿನಲ್ಲಿ ಮೀಸಲಾತಿ ಮಸೂದೆಯನ್ನು ಮಂಡಿಸಲೂ ಅವಕಾಶ ನೀಡದೆ ಪ್ರತಿಭಟಿಸಿದ ರಾಜಕೀಯದ ಪಕ್ಷಗಳಷ್ಟೇ, ಮಂಡಿಸುವ ದಿಟ್ಟ ನಿರ್ಧಾರವನ್ನು ರಾಜಕೀಯ ಸಂಕಲ್ಪವನ್ನು ಪ್ರದರ್ಶಿಸಿದ ಆಳುವ ಪಕ್ಷವೂ ಮಹಿಳಾ ಮೀಸಲಾತಿ ಪರವಾಗಿಲ್ಲವೆಂಬುದನ್ನು ಸ್ಪಷ್ಟಪಡಿಸಿದೆ. ಮೀಸಲಾತಿಯಲ್ಲಿ ಒಳ ಮೀಸಲಾತಿಯನ್ನು ಕೇಳುತ್ತಿರುವ ರಾಜಕೀಯ ಪಕ್ಷಗಳ ಸ್ತ್ರೀಪರತೆಯೂ ಅನುಮಾನಸ್ಪದವಾದದ್ದೇ, ಕೆಳಜಾತಿ, ವರ್ಗಗಳಿಗೆ ಮೀಸಲಾತಿ ಸಿಗುವಂತಹ ತಿದ್ದುಪಡಿಯ ಮೀಸಲಾತಿ ಮಸೂದೆಗೆ ಈ ವಿರೋಧಿಗಳೆಲ್ಲ ಒಪ್ಪಿ ಬಿಡಬಹುದೆಂಬುದು ಒಂದು ಭ್ರಮೆಯಷ್ಟೆ. ಶತಮಾನಗಳಿಂದ ಅನುಭವಿಸಿಕೊಂಡು ಬಂದಿರುವ ಅಧಿಕಾರವನ್ನು ಹಂಚಿಕೊಳ್ಳುವುದು ಕೂಡ ಸುಲಭವಲ್ಲ. ಆದರೆ ಮಹಿಳಾ ಸಮುದಾಯ ಮೀಸಲಾತಿಯಿಂದ ರಾಜಕೀಯ ಅಧಿಕಾರ ಪಡೆಯುತ್ತದೋ ಇಲ್ಲವೋ, ಆದರೆ ಹೆಚ್ಚು ಹೆಚ್ಚು ರಾಜಕೀಯವಾಗಿ ಕ್ರಿಯಾಶೀಲವಾಗುವತ್ತ ಗಮನ ಹರಿಸಬೇಕಾದ್ದು ಅಗತ್ಯ.

- ಕೃಪೆ : ದಿ ಹಿಂದೂ

# ಮರಳುಗಾಡಿನ ಕುಸುಮ

- ಭಾರತಿ ಮೋಹನ ಕೋಟಿ

'ಮರಳುಗಾಡಿನ ಕುಸುಮ' ಒಂದು ವಿಶಿಷ್ಟ ಬಗೆಯ ಆತ್ಮಕಥನ. ಆಫ್ರಿಕಾದ ಬುಡಕಟ್ಟು ಜನಾಂಗಗಳಲ್ಲಿ ಇಂದಿಗೂ ಆಚರಣೆಯಲ್ಲಿರುವ ಸ್ತ್ರೀ ಸುನ್ನತಿಯ ಬರ್ಬರ ಸಂಪ್ರದಾಯದ ವಿರುದ್ಧ ಹೋರಾಡಿದ ಸೋಮಾಲಿಯಾದ ಹೆಣ್ಣು ಮಗಳು ವಾರಿಸ್ ಡೇರಿಯ ಆತ್ಮವೃತ್ತಾಂತವಿದು. ಸೋಮಾಲಿ ದನಗಾಹಿ ಕುಟುಂಬದಿಂದ ಬಂದ ಈ ಹೆಣ್ಣು ಮಗಳು ತಾರುಣ್ಯದ ಬದುಕಿನಲ್ಲಿ ಅನೇಕ ಸಂಕಷ್ಟಗಳನ್ನು ಅನುಭವಿಸಿ ಕೊನೆಗೆ ಮಾಡೆಲಿಂಗ್ ರಂಗ ಪ್ರವೇಶಿಸಿದ ಜೀವನ ವೃತ್ತಾಂತ ಅತ್ಯಂತ ರೋಚಕವಾಗಿದೆ. ಸ್ತ್ರೀ ಸುನ್ನತಿಯ ಕ್ರೂರ ಆಚರಣೆಯ ವಿರುದ್ಧ ವಾರಿಸ್ ಡೇರಿ ವಿಶ್ವಸಂಸ್ಥೆಯ ಸಹಕಾರದೊಂದಿಗೆ ಸಮರವನ್ನೇ ಸಾರಿದ್ದಾಳೆ.

## *ಏಕಾಂಗಿಯ ಪಯಣ*

ನನ್ನದು ಸೋಮಾಲಿಯಾ ಮರಭೂಮಿಯಲ್ಲಿಯ ದನಗಾಹಿ ಪಂಗಡಕ್ಕೆ ಸೇರಿದ ಕುಟುಂಬ. ಬಾಲ್ಯದಲ್ಲಿ ನಿಸರ್ಗದ ಸುಂದರ ದೃಶ್ಯಗಳನ್ನು ನೋಡುತ್ತಾ, ಇಂಪಾದ ಹಾಡು ಕೇಳುತ್ತಾ, ಗಾಳಿಯಲ್ಲಿಯ ಸುಗಂಧ ಮೂಸುತ್ತಾ ತಿರುಗಾಡುತ್ತಿರುವುದು ಸಂತೋಷದಾಯಕವಾಗಿತ್ತು. ಸಿಂಹಗಳು ಬಿರುಬಿಸಿಲಲ್ಲಿ ಬೇಯುತ್ತ ಕುಳಿತಿರುವುದನ್ನು ನಿರಾತಂಕವಾಗಿ ನೋಡುತ್ತಿದ್ದೆವು. ಜಿರಾಫೆ, ಝೀಬ್ರಾ ಮತ್ತು ತೋಳಗಳೊಂದಿಗೆ ಓಡಾಡುತ್ತಿದ್ದೆವು. ಮೊಲದಂಥ ಪುಟ್ಟ ಪ್ರಾಣಿಗಳನ್ನು ಅಟ್ಟಿಸಿಕೊಂಡು ಉಸುಕಿನಲ್ಲಿ ಓಡಾಡುತ್ತ ಆನಂದವಾಗಿದ್ದೆವು.

ಬರಬರುತ್ತಾ ಆ ಸಂತಸದ ಕ್ಷಣಗಳು ಕಣ್ಮರೆಯಾದವು. ಜೀವನ ದುರ್ಭರವಾಯಿತು. ನನಗೆ ಐದುವರ್ಷ ತುಂಬುವಷ್ಟರಲ್ಲಿಯೇ ಆಫ್ರಿಕಾದ ಹೆಂಗಸು ಎಂಥ ಭಯಾನಕ ನೋವು ಅನುಭವಿಸುತ್ತ ಅಸಹಾಯಕ ಸ್ಥಿತಿಯಲ್ಲಿ ಜೀವಿಸುವಳೆಂಬುದು ಅರ್ಥವಾಗತೊಡಗಿತು. ಆಫ್ರಿಕಾದಲ್ಲಿ ಹೆಣ್ಣುಮಕ್ಕಳೇ ಕುಟುಂಬದ ಬೆನ್ನೆಲುಬು. ಬಹಳಷ್ಟು ಕೌಟುಂಬಿಕ ಕೆಲಸಗಳನ್ನು ಅವರೇ ನಿರ್ವಹಿಸುವರು. ಆದರೂ ಕೌಟುಂಬಿಕ ವಿಷಯಗಳಲ್ಲಿ ನಿರ್ಧಾರ ಕೈಗೊಳ್ಳುವಲ್ಲಿ ಅವರಿಗೆ ಯಾವ ಅಧಿಕಾರವೂ ಇಲ್ಲ. ತಾವು ಮದುವೆಯಾದ ವ್ಯಕ್ತಿಯೊಂದಿಗೂ ಸಹ ಏನೂ ಮಾತನಾಡುವ ಹಕ್ಕು ಅವರಿಗಿಲ್ಲ.

ನಾನು ಹದಿಮೂರು ವರುಷದವಳಾಗುವ ಹೊತ್ತಿಗೆ ಹಲವು ಸಂಪ್ರದಾಯಗಳಿಂದ ಸುತ್ತುವರೆದಿದ್ದೆ. ಮುಂಚಿನಂತೆ ಚಿಕ್ಕ ಹುಡುಗಿಯಾಗಿರದೆ ನಾನೀಗ ನಂಬಲರ್ಹವಾಗದ ರೀತಿಯಲ್ಲಿ ಬೆಳೆದಿದ್ದೆ. ಕಷ್ಟ ಅನುಭವಿಸುವುದರ ಹೊರತು ಬೇರಾವ ಆಯ್ಕೆಯೂ ನನಗಿಲ್ಲ ಎಂಬುದು ತಿಳಿದಿತ್ತು. ಆದರೆ ಈ ಬಾರಿ ಮಾತ್ರ ಪಲಾಯನಮಾಡುವ ನಿರ್ಧಾರ ಕೈಗೊಂಡೆ. ನನ್ನ ತಂದೆ ಮದುವೆಯ ಸುದ್ದಿ ಹೇಳಿದ ದಿನವೇ ನನ್ನ ಪ್ರಯಾಣದ ದುಃಸ್ವಪ್ನ ಆರಂಭವಾಯಿತು. ಆದಷ್ಟು ತೀವ್ರ ನಾನು ಕಾರ್ಯ ಪ್ರವೃತ್ತಳಾಗಬೇಕಾದ್ದರಿಂದ ನಾನು ಓಡಿಹೋಗಬೇಕೆಂದಿರುವ ವಿಷಯ ತಾಯಿಗೆ ಮಾತ್ರ ತಿಳಿಸಿದೆ. ಸೋಮಾಲಿಯಾದ ರಾಜಧಾನಿ ಮೊಗದಿಶುವಿನಲ್ಲಿ ನನ್ನ ಚಿಕ್ಕಮ್ಮನನ್ನು ಹುಡುಕುವುದು ನನ್ನ ಉದ್ದೇಶವಾಗಿತ್ತು.

ಇರುಳು ತಂದೆ, ಸೋದರ, ಸೋದರಿಯರು ಮಲಗಿರುವಾಗ ನನ್ನ ತಾಯಿ 'ಈಗಲೇ ಹೊರಟುಬಿಡು' ಎಂದು ನನ್ನನ್ನೆಬ್ಬಿಸಿದಳು.

ಸುತ್ತಮುತ್ತ ನಿರುಕಿಸಲಾಗಿ ನಾನು ಒಯ್ಯಲು ನೀರು, ಹಾಲು, ಊಟ ಏನೇನೂ ಇರಲಿಲ್ಲ. ಹಾಗೇ ಬರಿಗಾಲಿನಲ್ಲಿ ಕೊರಳ ಸುತ್ತ ವಸ್ತ್ರವೊಂದನ್ನು ಸುತ್ತಿಕೊಂಡು ಮರುಭೂಮಿಯ ಕಗ್ಗತ್ತಲೆಯ ರಾತ್ರಿಯಲ್ಲಿ ಓಡತೊಡಗಿದೆ. ಯಾವ ದಿಕ್ಕಿಗೆ ಮೊಗದಿಶು ಇದೆ ಎಂಬುದೇ ನನಗೆ ಗೊತ್ತಿರಲಿಲ್ಲ. ಕತ್ತಲಿನಲ್ಲಿ ಹಾಗೇ ಓಡತೊಡಗಿದೆ. ಕತ್ತಲಿನಲ್ಲಿ ಮೊದಮೊದಲು ನಿಧಾನವಾಗಿ ಓಡುತ್ತಿದ್ದ ನಾನು ಬೆಳಕು ಹರಿಯತೊಡಗಿದಂತೆ ಚಿಗರೆ ಮರಿಯಂತೆ ವೇಗವಾಗಿ ಓಡತೊಡಗಿದೆ. ಅನೇಕ ತಾಸುಗಳು ಕಳೆದಿರಬಹುದು. ಮಧ್ಯಾಹ್ನದ ಹೊತ್ತಿಗೆ ಅನಂತದವರೆಗೆ ಹಬ್ಬಿಕೊಂಡಿದ್ದ ಕೆಂಪು ಮರಳುಭೂಮಿ ತಲುಪಿದ್ದೆ. ಹಸಿವು ನೀಡಿಕೆಗಳಿಂದ ದಣಿದಿದ್ದ ನಾನು ಓಟ ನಿಧಾನಗೊಳಿಸಿ ನಡೆಯತೊಡಗಿದೆ.

ಮುಂದೇನು ಮಾಡುವುದೆಂಬ ಯೋಚನೆಯಲ್ಲಿ ಮುಳುಗಿರುವಾಗಲೆ ''ವಾರಿಸ್ ವಾರಿಸ್...'' ಎಂಬ ತಂದೆಯ ಕೂಗು ಸುತ್ತೆಲ್ಲ ಪ್ರತಿಧ್ವನಿಸತೊಡಗಿತು. ಸಿಕ್ಕುಬಿದ್ದದ್ದೇ ಆದರೆ ಖಂಡಿತವಾಗಿ ಆತ ನನ್ನ ಮದುವೆ ಮಾಡುತ್ತಾನೆಂದು ಹೆದರಿಕೆಯಿಂದ ಕಂಗಾಲಾದೆ. ಉಸುಕಿನಲ್ಲಿ ನನ್ನ ಹೆಜ್ಜೆಗುರುತುಗಳನ್ನನುಸರಿಸಿ ಹುಡುಕುತ್ತ ಬಂದ ಆತ ನನ್ನನ್ನು ಸಮೀಪಿಸಿ ಬಿಟ್ಟಿದ್ದ.

ಮತ್ತೆ ನಾನು ಓಡಲು ಉಪಕ್ರಮಿಸಿದೆ. ದಿಬ್ಬವೊಂದರ ಮೇಲೆ ಆತ ಬರುತ್ತಿರುವುದು ಕಂಡಿತು. ಅವನನ್ನು ನೋಡುತ್ತಲೇ ಭಯಗೊಂಡು ನಾನು ವೇಗವನ್ನು ದ್ವಿಗುಣಗೊಳಿಸಿದೆ. ಮೇಲೆ, ಕೆಳಗೆ, ಉಸುಕಿನ ದಿನ್ನೆಯ ಮೇಲೆ ಮೆಲ್ಲ ಮೆಲ್ಲಗೆ ಜಾರುತ್ತಾ ಸರಿಯುತ್ತಾ ಹಾಗೇ ತಾಸುಗಟ್ಟಲೆ ಓಡಿದೆವು. ಕೊನೆಗೊಮ್ಮೆ ಆತನ ಧ್ವನಿ ಕೇಳದಾಯ್ತು, ಆತನೂ ಕಾಣದಾದ.

ಸೂರ್ಯಾಸ್ತದವರೆಗೂ ಓಡುತ್ತಲೇ ಇದ್ದೆ. ಇರುಳು ಕವಿಯುತ್ತಿದ್ದಂತೆ ಅಂಧಕಾರದಲ್ಲಿ ಏನೂ ಕಾಣದಾಯ್ತು. ಕಾಲುಗಳಿಂದ ರಕ್ತ ಸುರಿಯುತ್ತಿತ್ತು. ಹಸಿವಿನಿಂದ ಕಂಗೆಟ್ಟ ನಾನು ಮರವೊಂದರ ಕೆಳಗೆ ಮಲಗಿ ಗಾಢ ನಿದ್ದೆಯ ವಶವಾದೆ.

ಬೆಳಿಗ್ಗೆ ಉರಿಯುವ ಸೂರ್ಯ ಕಣ್ಣುಕುಕ್ಕಲು ನನಗೆ ಎಚ್ಚರಿಕೆಯಾಯ್ತು. ಮೇಲೆದ್ದು ಪುನಃ ಓಡತೊಡಗಿದೆ. ದಿನಗಟ್ಟಲೆ ಓಡಿದೆ. ಹಸಿವು, ನೀರಡಿಕೆ, ಭಯ, ಹೆದರಿಕೆ, ನೋವಿನ ದಿನಗಳವು. ಕತ್ತಲು ಆವರಿಸುತ್ತಿದ್ದಂತೆ ವಿಶ್ರಮಿಸುತ್ತಿದ್ದೆ. ಮಧ್ಯಾಹ್ನದ ಹೊತ್ತು ಮರದ ನೆರಳಲ್ಲಿ ಚಿಕ್ಕ ನಿದ್ದೆ ಮಾಡುತ್ತಿದ್ದೆ.

ಹೀಗೆ ಒಂದು ಮಧ್ಯಾಹ್ನ ಮಲಗಿರುವಾಗ ಎಂಥದೋ ಶಬ್ದವೊಂದರಿಂದ ಎಚ್ಚರವಾಯ್ತು. ಕಣ್ತೆರೆದು ನೋಡಲಾಗಿ ಅತೀ ಹತ್ತಿರದಲ್ಲಿ ಸಿಂಹದ ಮುಖವೊಂದು ಕಂಡಿತು. ಎದ್ದು ನಿಲ್ಲಲು ಪ್ರಯತ್ನಿಸಿದೆ. ಆದರೆ ಊಟವಿಲ್ಲದೆ ನಿಶ್ಯಕ್ತಿಯಿಂದಾಗಿ ಕಾಲುಗಳು ನಡುಗತೊಡಗಿದವು. ಆಫ್ರಿಕಾದ ನಿಷ್ಕರುಣಿ ಬಿಸಿಲಿನಿಂದ ರಕ್ಷಣೆ ಒದಗಿಸಿದ ಆ ಮರದ ಕಾಂಡಕ್ಕೆ ಆತುಕೊಂಡೆ. ಮರುಭೂಮಿಗುಂಟ ಸಾಗಿ ಬಂದ ನನ್ನ ದೀರ್ಘ ಪ್ರವಾಸ ಮುಕ್ತಾಯದ ಹಂತಕ್ಕೆ ಬಂದಿತ್ತು. ನಾನು ನಿರ್ಭಯಳಾಗಿದ್ದೆ ಮತ್ತು ಸಾಯಲು ಸಿದ್ಧಳಾಗಿದ್ದೆ.

'ಬಾ, ತಿನ್ನುಬಾ ನಾನು ಸಿದ್ಧಳಾಗಿರುವೆ' ಸಿಂಹಕ್ಕೆ ಹೇಳಿದೆ. ನನ್ನನ್ನು ದಿಟ್ಟಿಸುತ್ತಾ, ನಾಲಿಗೆಯಿಂದ ತುಟಿ ಸವರಿಕೊಳ್ಳುತ್ತಾ ಅದು ನನ್ನ ಹಿಂದೆ ಮುಂದೆ ಹೆಜ್ಜೆಯ ಮೇಲೆ ಹೆಜ್ಜೆ ಇಡುತ್ತಾ ಸೊಬಗಿನಿಂದ ಸುತ್ತಾಡಿತು. ಒಂದೇಟಿಗೆ ಅದು ನನ್ನನ್ನು ಅಪ್ಪಚ್ಚಿ ಮಾಡಬಹುದಿತ್ತು. ಕೊನೆಗೊಮ್ಮೆ ಅದು ಹಿಂದಿರುಗಿ ನಡೆಯುತ್ತಾ ದೂರ ಹೊರಟುಹೋಯಿತು. ಚಿಕ್ಕಮಾಂಸದ ತುಣುಕಿನಂತೆ ಕಂಡು ಬಂದ ನಾನು ತಿನ್ನಲು ಅನರ್ಹನೆಂದು ಭಾವಿಸಿತೇನೋ?

ಆ ಸಿಂಹ ನನ್ನನ್ನು ಕೊಲ್ಲುವುದಿಲ್ಲವೆಂದು ಮನದಟ್ಟಾದಾಗಲೇ ನನಗನ್ನಿಸಿತು, 'ದೇವರು ಯಾವುದೊ ಮಹತ್ಕಾರ್ಯಕ್ಕಾಗಿ ನನ್ನನ್ನು ಜೀವಂತ ಉಳಿಸಿರುವನೆಂದು'. 'ಏನಿರಬಹುದು ಅದು?' ಎಂದು ನನ್ನನ್ನು ನಾನೆ ಪ್ರಶ್ನಿಸಿಕೊಳ್ಳುತ್ತಾ ಕಾಲುಗಳಿಗೆ 'ನಡೆಯಿರಿ ಇನ್ನು' ಎಂದು ಹೇಳಿ ಮತ್ತೆ ಓಟ ಪ್ರಾರಂಭಿಸಿದೆ.

## ಮರುಭೂಮಿಯ ಮಗು

ಮನೆ ಬಿಡುವುದಕ್ಕಿಂತ ಮುಂಚೆ ನನ್ನ ಜೀವನ ನಿಸರ್ಗ ಹಾಗೂ ಕುಟುಂಬಕ್ಕೆ ಮಾತ್ರ ಸೀಮಿತವಾಗಿತ್ತು. ಬಹಳಷ್ಟು ಸೋಮಾಲಿ ಜನರಂತೆ ನಾವೂ ಕುರಿ, ಆಡುಗಳನ್ನ ಕಾಯುತ್ತಿದ್ದೆವು. ಒಂಟೆಗಳು ನಮ್ಮ ಬದುಕಿನ ಆಧಾರವಾಗಿದ್ದವು. ನೀರಿನಿಂದ ದೂರವಾಗಿದ್ದಾಗ ಹೆಣ್ಣು ಒಂಟೆಗಳು ಹಾಲು ನೀಡಿ ನಮ್ಮ ದಾಹ ತಣಿಸುತ್ತಿದ್ದವು. ಬೆಳಗಿನ ತಿಂಡಿಗೆ ಹಾಗೂ ರಾತ್ರಿಯೂಟಕ್ಕೆ ನಮಗೆ ಒಂಟೆಯ ಹಾಲು ಪುಷ್ಟಿಕರವಾದ ಆಹಾರವಾಗಿತ್ತು.

ಸೂರ್ಯನೊಂದಿಗೆ ಏಳುತ್ತಿದ್ದ ನಮಗೆ ಕೊಟ್ಟಿಗೆಗೆ ಹೋಗಿ ಹಾಲು ಕರೆಯುವುದರೊಂದಿಗೆ ಮನೆಗೆಲಸ ಪ್ರಾರಂಭವಾಗುತ್ತಿತ್ತು. ಹೋದಲೆಲ್ಲ ನಾವು ಎಳೆಮರದ ಕೊಂಬೆಗಳನ್ನು ಕಡಿದು ತಂದು ಕುರಿಗಳಿಗೆ ರೊಪ್ಪ ಮಾಡುತ್ತಿದ್ದೆವು. ಅದರಿಂದ ರಾತ್ರಿ ಅವು ಅಲೆದಾಡುವುದು ತಪ್ಪಿ ಒಳಗೆ ಇರುವಂತಾಗುತ್ತಿತ್ತು.

ಆಡು ಕುರಿ ಒಂಟೆಗಳನ್ನು ಹಾಲಿಗಾಗಿಯೂ ಹಾಗೂ ಸರಕು ಸಾಮಗ್ರಿ ಕೊಳ್ಳಲೂ ಸಾಕುತ್ತಿದ್ದೆವು. ಚಿಕ್ಕವಳಿದ್ದಾಗಿನಿಂದ ನಾನು 60-70 ಆಡುಕುರಿಗಳನ್ನು ಮೇಯಿಸಲು ಮರಭೂಮಿಯಲ್ಲಿ ಕರೆದೊಯ್ಯುತ್ತಿದ್ದೆ. ಉದ್ದನೆಯ ಕೋಲಿನಿಂದ ನಾನೊಬ್ಬಳೇ ಕುರಿಮಂದೆಯನ್ನು ಕಾಯುತ್ತಿದ್ದೆ. ನನ್ನ ಹಾಡು ಅವುಗಳಿಗೆ ದಿಕ್ಸೂಚಿಯಾಗಿರುತ್ತಿತ್ತು.

ಸೋಮಾಲಿಯಾದಲ್ಲಿ ಯಾರೂ ಗೋಮಾಳ ಹೊಂದಿರಲಿಲ್ಲ. ಹೀಗಾಗಿ ಗಿಡಮರಗಳಿರುವ ಪ್ರದೇಶವನ್ನು ಹುಡುಕಿಕೊಂಡು ಹೋಗುವುದು ನನಗೆ ಅನಿವಾರ್ಯವಾಗಿತ್ತು. ಆಡು ಕುರಿಗಳು ಮೇಯುತ್ತಿರುವಾಗ ಕತ್ತೆ ಕಿರುಬಗಳು ಕಳ್ಳತನದಿಂದ ಬಂದು ಕುರಿಮರಿಯನ್ನು ಎಳೆದುಕೊಂಡು ಹೋಗಿದ್ದೂ ಉಂಟು. ಸಿಂಹಗಳಿಂದಲೂ ಅಪಾಯವಿತ್ತು.

ನಮ್ಮ ಮನೆಯೆಂದರೆ ಗೋಲಾಕಾರದ ಗೂಡಾರದಂತಿರುವ ಗುಡಿಸಲು. ಕಟ್ಟಿಗೆಯ ಚೌಕಟ್ಟನ್ನು ಮಾಡಿ ಅದರ ಮೇಲೆ ಹುಲ್ಲಿನಿಂದ ಹೆಣೆದಂತಹುದು. ಅದು ಸುಮಾರು ಎರಡು ಮೀಟರುಗಳಷ್ಟು ಸುತ್ತಳತೆಯದು. ಒಂದು ಪ್ರದೇಶದಿಂದ ಮತ್ತೊಂದು ಪ್ರದೇಶಕ್ಕೆ ಹೋಗಬೇಕಾಗಿ ಬಂದಲ್ಲಿ ಕಟ್ಟಿಗೆ ಚೌಕಟ್ಟನ್ನು ಬಿಚ್ಚಿ ಒಂಟೆಯ ಡುಬ್ಬಕ್ಕೆ ಕಟ್ಟುತ್ತಿದ್ದೆವು. ನೀರು, ಗಿಡಮರ, ಎಲೆಗಳ ಗೊಂಚಲು ಕಂಡಲ್ಲಿ ಮತ್ತೆ ಬಿಡಾರ ಹೂಡುತ್ತಿದ್ದೆವು. ಬಿರುಬಿಸಿಲಿನಿಂದ ರಕ್ಷಿಸಿಕೊಳ್ಳಲು, ತಾಜಾಹಾಲನ್ನು ಸಂಗ್ರಹಿಸಿಡಲು ಗುಡಿಸಲು ನಮಗೆ ಆಶ್ರಯವಾಗಿತ್ತು. ಚಾಪೆಯೊಂದರ ಮೇಲೆ ನಾವು ಮಕ್ಕಳೆಲ್ಲ ತಬ್ಬಿಕೊಂಡು ಮನೆಯ ಹೊರಗೆ ಆಗಸದ ಕೆಳಗೆ ನಕ್ಷತ್ರಗಳಡಿಯಲ್ಲಿ ಮಲಗುತ್ತಿದ್ದೆವು. ಒಂದು ತುದಿಗೆ ತಂದೆ ನಮ್ಮ ರಕ್ಷಕನಂತೆ ಮಲಗುತ್ತಿದ್ದ.

ನನ್ನ ಅಪ್ಪ ಬಹಳ ಸುಂದರಾಂಗನಾಗಿದ್ದ. ಆರು ಫೂಟು ಎತ್ತರ, ತೆಳ್ಳಗೆ ಅಮ್ಮನಿಗಿಂತ ಬಣ್ಣದಲ್ಲಿ ತುಸು ಬೆಳ್ಳಗಿದ್ದ. ಅಮ್ಮನೂ ಚೆಲುವೆಯೆ. ಕಪ್ಪನೆಯ ನುಣುಪಾದ ಚರ್ಮವುಳ್ಳ ಆಕೆಯ ಮುಖ ಕಪ್ಪುಶಿಲೆಯಲ್ಲಿ ಕೆತ್ತಿದ ಪರಿಪೂರ್ಣ ಶಿಲ್ಪದಂತಿತ್ತು. ಅವಳು ಶಾಂತ - ಗಂಭೀರ ನಡವಳಿಕೆಯವಳಾಗಿದ್ದಳು.

ಅಮ್ಮ ಮೊಗದಿಶುವಿನಲ್ಲಿ ಹುಟ್ಟಿ ಬೆಳೆದವಳು. ಅವಳ ತವರಿನವರು ಹಣ ಹಾಗೂ ಅಧಿಕಾರ ಹೊಂದಿದ್ದರು. ನನ್ನ ಅಪ್ಪ ಯಾವಾಗಲೂ ಮರುಭೂಮಿಯಲ್ಲಿ · ಅಲೆಮಾರಿಯಂತೆ ಅಲೆದಾಡುತ್ತಿದ್ದ. ನನ್ನ ಅಮ್ಮನನ್ನು ಮದುವೆಯಾಗಲು ಪರವಾನಿಗೆ ಕೇಳಿದಾಗ ನನ್ನ ಅಜ್ಜ ಸುತರಾಂ ಒಪ್ಪಲಿಲ್ಲ. ಅಮ್ಮ ಹದಿನಾರು ವರುಷದವಳಿದ್ದಾಗ ಅಲ್ಲಿಂದ ಓಡಿ ಬಂದು ಅಪ್ಪನನ್ನು ಮದುವೆಯಾಗಿದ್ದಳು.

ಅಮ್ಮ ಮುದ್ದಿನಿಂದ ನನ್ನನ್ನು 'ಅವ್‌ಡೊಹಾಲ್' ಅಂದರೆ ಪುಟ್ಟಬಾಯಿಯವಳು ಎನ್ನುತ್ತಿದ್ದಳು. ನನಗೆ 'ವಾರಿಸ್' ಎಂದು ಹೆಸರಿಟ್ಟಿದ್ದರು. ವಾರಿಸ್ ಎನ್ನುವುದು ಮರುಭೂಮಿಯ ಒಂದು ಹೂವು. ಸೋಮಾಲಿಯಾದಲ್ಲಿ ತಿಂಗಳುಗಟ್ಟಲೆ ಮಳೆ ಆಗುವುದಿಲ್ಲ

ಒಮ್ಮೆ ಮಳೆ ಬೀಳಲು ಶುರುವಾಯಿತೆಂದರೆ ಹಳದಿ-ಕೆಸರಿ ಬಣ್ಣದ ಹೂಗಳು ಮರುಭೂಮಿಯಲ್ಲಿ ಸೃಷ್ಟಿಯ ಅದ್ಭುತ ಎಂಬಂತೆ ಅರಳಿ ನಗುತ್ತವೆ.

## ಹೆಂಗಸಾಗುವ ಮಹೋತ್ಸವ

ಅಲೆಮಾರಿಗಳ ಸಂಸ್ಕೃತಿಯಲ್ಲಿ ಮದುವೆಯಾಗದ ಹೆಣ್ಣುಮಗಳಿಗೆ ಸ್ಥಾನಮಾನವಿಲ್ಲ. ಆದ್ದರಿಂದ ತಮ್ಮ ಹೆಣ್ಣುಮಕ್ಕಳಿಗೆ ಒಳ್ಳೆಯ ಗಂಡನನ್ನು ಹುಡುಕಿಕೊಡುವುದು ತಮ್ಮ ಆದ್ಯ ಕರ್ತವ್ಯವೆಂದು ತಂದೆ ತಾಯಂದಿರು ಭಾವಿಸುತ್ತಾರೆ.

ಸೋಮಾಲಿಯಾದಲ್ಲಿ ಚಾಲ್ತಿಯಲ್ಲಿರುವ ಪದ್ಧತಿಯಂತೆ ಹೆಂಗಸಿನ ತೊಡೆಗಳ ಮಧ್ಯೆ ಕುರೂಪಿ ವಿಷಯಗಳಿವೆ. ಭಗನ, ಹಿರಿಭಗೋಷ್ಠ ಕಿರಿಭಗೋಷ್ಠಗಳನ್ನು ತೆಗೆದು ಹಾಕದ ಹೊರತು ಹೆಂಗಸನ್ನು ಹೊಲಸು, ಅತಿಕಾಮಿ ಹಾಗೂ ಮದುವೆಯಾಗಲು ಅನರ್ಹಳೆಂದು ತೀರ್ಮಾನಿಸುವರು. ಅವುಗಳನ್ನು ತೆಗೆದನಂತರ ಗಾಯವನ್ನು ಹೊಲಿಗೆ ಹಾಕಿ ಮುಚ್ಚಿ ಒಂದು ಚಿಕ್ಕದ್ವಾರನ್ನು ಮಾತ್ರ ಮೂತ್ರ ಹೋಗಲು ಹಾಗೂ ಋತುಸ್ರಾವಕ್ಕೆಂದು ಬಿಡಲಾಗುವುದು. ಇದನ್ನು 'ಇನ್‌ಫಿಬ್ಯೂಲೇಷನ್' ಎನ್ನುವರು. ಅಥವಾ 'ಫಿಮೇಲ ಸರ್‌ಕಮ್‌ಸಿಷನ್' ಎಂದರೆ ಸ್ತ್ರೀ ಸುನ್ನತಿ ವಿಧಾನ ಎಂದೂ ಕರೆಯುವರು.

ಸ್ತ್ರೀ ಜನನೇಂದ್ರಿಯದ ಸುನ್ನತಿ ಮಾಡುವ ಜಿಪ್ಸಿ ಹೆಂಗಸಿಗೆ ದುಬಾರಿ ಹಣ ತೆರಬೇಕಾಗುವುದು ಆದರೂ ಅದನ್ನು ಒಳ್ಳೇ ಕಾರ್ಯಕ್ಕೆ ಖರ್ಚು ಮಾಡುವ ಬಾಬ್ತು ಎಂದು ತಿಳಿಯಲಾಗಿದೆ. ಇದನ್ನು ಮಾಡದ ಹೊರತು ಹೆಣ್ಣು ಹುಡುಗಿಯರು ಮದುವೆ ಮಾರುಕಟ್ಟೆಯಲ್ಲಿ ಬಿಕರಿಯಾಗಲಾರರು.

ಈ ಆಚರಣೆಯ ಅಂದರೆ ಜನನೇಂದ್ರಿಯವನ್ನು ಕತ್ತರಿಸಿ ಹೊಲಿಯುವಿಕೆಯ ಯಾವ ನಿಜವಾದ ವಿವರಗಳನ್ನೂ ಹುಡುಗಿಯರಿಗೆ ವಿವರಿಸಲಾಗುವುದಿಲ್ಲ - ಅದೊಂದು ರಹಸ್ಯ. ನಿಮ್ಮ ಸಮಯ ಬಂದಾಗ ನಿಮಗೆ ಏನೋ ಘಟಿಸಲಿದೆಯಂದು ಮಾತ್ರ ತಿಳಿಯುವುದು. ಹೀಗಾಗಿ ಎಲ್ಲ ಸೋಮಾಲಿ ಹುಡುಗಿಯರು ಹೆಂಗಸಾಗುವ ಈ ಮಹೋತ್ಸವಕ್ಕಾಗಿ ಕಾತರದಿಂದ ಕಾಯುವರು. ಮೊದಲೆಲ್ಲ ಇದನ್ನು ಋತುಮತಿಯಾದ ಹುಡುಗಿಯರ ಮೇಲೆ ನಡೆಸಲಾಗುತ್ತಿತ್ತು. ಆದರೆ ಈಗೀಗ ಚಿಕ್ಕ ಚಿಕ್ಕ ಹುಡುಗಿಯರ ಮೇಲೂ ಇದು ನಡೆಯುತ್ತಿದೆ.

ನಾನು ಐದು ವರುಷದವಳಿರುವಾಗ ಒಂದು ಸಂಜೆ ನನ್ನ ತಾಯಿ 'ನಿನ್ನ ತಂದೆ ಜಿಪ್ಸಿ ಹೆಂಗಸನ್ನು ಭೇಟಿಯಾಗಿದ್ದನಂತೆ, ಆಕೆ ಇಂದೊ ನಾಳೆಯೊ ಇಲ್ಲಿಗೆ ಬರಬಹುದು' ಎಂದು ಹೇಳಿದಳು.

ಸುನ್ನತಿಯ ಹಿಂದಿನ ರಾತ್ರಿ ನನಗೆ ವಿಶೇಷ ರಾತ್ರಿಯೂಟದ ವ್ಯವಸ್ಥೆಯಾಗಿತ್ತು. ಮನೆಯವರೆಲ್ಲ ನನಗೆ ಹೆಚ್ಚಿನ ಉಪಚಾರ ಮಾಡಿದರು. ಅಮ್ಮ ನನಗೆ ಹೆಚ್ಚು ಹಾಲು ಅಥವಾ ನೀರು ಕುಡಿಯದಿರಲು ಹೇಳಿದಳು. ಉತ್ಸುಕತೆಯಿಂದ ನಾನು ಎಚ್ಚರವಾಗಿಯೇ ಇದ್ದೆ. ಒಮ್ಮಿಂದೊಮ್ಮೆಲೆ ಅಮ್ಮ ನನ್ನ ಹತ್ತಿರ ನಿಂತಿರುವುದು ಕಾಣಿಸಿತು. ಆಕಾಶ ಇನ್ನೂ ಕಪ್ಪಾಗಿತ್ತು. ನಾನು ನನ್ನ ಹೊದಿಕೆಯನ್ನೆಳೆದುಕೊಂಡು ನಿದ್ದೆಗಣ್ಣಿನಲ್ಲಿಯೇ ಮುಗ್ಗರಿಸುತ್ತ ಅಮ್ಮನ ಹಿಂದೆ ನಡೆದೆ.

ಪೊದೆಯೊಂದರ ಹತ್ತಿರ ನಿಂತು ಅಮ್ಮ 'ಇಲ್ಲಿಯೇ ದಾರಿ ಕಾಯೋಣ' ಎಂದಳು. ತಣ್ಣನೆಯ ನೆಲದ ಮೇಲೆ ನಾವಿಬ್ಬರೂ ಕುಳಿತೆವು. ನುಸುಕು ಹರಿಯುತ್ತಿದ್ದಂತೆ ಜಿಪ್ಸಿ ಹೆಂಗಸಿನ ಪಾದರಕ್ಷೆಯ ಕ್ಲಿಕ್ ಕ್ಲಿಕ್ ಶಬ್ದ ಕೇಳಿ ಬಂತು. ನೋಡು ನೋಡುವಷ್ಟರಲ್ಲಿ ಅವಳು ನನ್ನ ಪಕ್ಕದಲ್ಲಿದ್ದಳು.

ಒಂದು ಚಪ್ಪಟೆ ಕಲ್ಲುಬಂಡೆಯ ಮೇಲೆ ಕೂರಿಸಿದಳು. ಅವಳು ನನ್ನ ಬೆನ್ನ ಹಿಂದೆ ಕುಳಿತು ನನ್ನ ತಲೆಯನ್ನು ಎದೆಗೆ ಆನಿಸಿ ಒತ್ತಿ ಹಿಡಿದುಕೊಂಡಳು. ಅವಳ ಕಾಲು ನನ್ನ ದೇಹವನ್ನು ಬಳಸಿ ಹಿಡಿದಿದ್ದವು. ನಾನು ನನ್ನ ಕೈಗಳನ್ನು ಅವಳ ತೊಡೆಯ ಸುತ್ತ ಬಳಸಿ ಹಿಡಿದೆ. ನನ್ನ ಹಲ್ಲುಗಳ ಮಧ್ಯೆ ಎಂಥದೋ ಗಿಡದ ಬೇರೊಂದನ್ನು ಇಟ್ಟು ಇದನ್ನು ಅಗಿಯುತ್ತಿರು ಎಂದಳು.

ನಾನು ಹೆದರಿಕೆಯಿಂದ ಮರಗಟ್ಟಿ ಹೋಗಿದ್ದೆ. ಇದು ಏನೋ ನನ್ನನ್ನು ನೋಯಿಸುವಂತಹುದು ಎನ್ನುತ್ತ ಬೇರನ್ನು ಕಚ್ಚಿ ಹಿಡಿದೆ.

ಅಮ್ಮ ನನ್ನ ಮೇಲೆ ಬಾಗಿ ಕಿವಿಯಲ್ಲಿ ಪಿಸುಗುಟ್ಟಿದ್ದಳು. 'ಒಳ್ಳೆಯ ಹುಡುಗಿಯಾಗಲು ಪ್ರಯತ್ನಿಸು ಮಗೂ, ಅಮ್ಮನಿಗಾಗಿ ಧೈರ್ಯಶಾಲಿಯಾಗು, ಮತ್ತೆ ಅದು ತೀವ್ರ ಮುಗಿಯುತ್ತದೆ.'

ನಾನು ನನ್ನ ಕಾಲುಗಳ ಮಧ್ಯೆ ಹಣಿಕಿ ಜಿಪ್ಸಿ ಹೆಂಗಸನ್ನು ನೋಡಿದೆ. ಅವಳ ನೋಟ ಕಾಠಿಣ್ಯದಿಂದ ಕೂಡಿತ್ತು. ಅವಳು ನನ್ನ ಹಳೆಯ ಒರಟು ಕೈಚೀಲದಿಂದ ಮುರುಕು ಬ್ಲೇಡೊಂದನ್ನು ಹೊರತೆಗೆದಳು. ಅದರ ಹರಕುಮುರುಕು ತುದಿಗೆ ರಕ್ತ ಒಣಗಿ ಕರೆಗಟ್ಟಿದ್ದು ಕಂಡಿತು. ಜಿಪ್ಸಿ ಹೆಂಗಸು ಅದರ ಮೇಲೆ ಉಗುಳಿ ಅದನ್ನು ನನ್ನ ಉಡುಪಿಗೆ ಒರೆಸಿದಳು. ಕರಕರನೆ ಕೊಯ್ಯಲು ಆರಂಭಿಸಿದಂತೆ ಅಮ್ಮ ನನ್ನ ಕಣ್ಣಿಗೆ ಬಟ್ಟೆಯೊಂದನ್ನು ಕಟ್ಟಿದ್ದರಿಂದ ಕತ್ತಲು ಕವಿದು ನನಗೇನೂ ಕಾಣದಾಯ್ತು. ನನ್ನ ಚರ್ಮ ಕತ್ತರಿಸುತ್ತಿರುವುದರ ಅನುಭವವಾಯ್ತು, ಬ್ಲೇಡು ನನ್ನ ಚರ್ಮವನ್ನು ಹಿಂದೆ ಮುಂದೆ ಗರಗಸದಂತೆ ಕೊಯ್ಯುವ ಸದ್ದು ಕೇಳುತ್ತಿತ್ತು. ನೋವಿನ ಅನುಭವ ವರ್ಣನಾತೀತವಾಗಿತ್ತು. ಆದರೂ ನಾನು ಕೊಂಚ ಕೂಡ ಅಲುಗಾಡಲಿಲ್ಲ. ಅಲುಗಾಡಿದರೆ ಹಿಂಸೆಯ ಸಮಯ ದೀರ್ಘವಾದೀತೆಂಬ ಭಯದಿಂದ ನಿಶ್ಚಲಳಾಗಿ ಮಲಗಿದೆ. ದುರ್ದೈವಶಾತ್ ನನ್ನ ಕಾಲುಗಳು ನಿಯಂತ್ರಣ ಕಳೆದುಕೊಂಡು ನಡುಗತೊಡಗಿದವು. ನಾನು 'ಓ ದೇವರೇ, ಆದಷ್ಟು ಬೇಗ ಇದು ಮುಗಿದು ಹೋದರೆ ಸಾಕೆಂದು' ಪ್ರಾರ್ಥಿಸಿದೆ. ಅದು ಮುಗಿಯಿತನ್ನಿಸಿತು. ಏಕೆಂದರೆ ನಾನು ಪ್ರಜ್ಞೆತಪ್ಪಿದೆ.

ನನಗೆಚ್ಚರ ಬಂದಾಗ ನನ್ನ ಕಣ್ಣಿನ ಕಟ್ಟನ್ನು ಬಿಚ್ಚಲಾಗಿತ್ತು. ಜಿಪ್ಸಿ ಹೆಂಗಸು ಹತ್ತಿರಲ್ಲಿದ್ದ ಜಾಲಿ ಗಿಡದ ಮುಳ್ಳನ್ನು ತಂದು ಕುಪ್ಪೆ ಹಾಕಿದಳು. ಮುಳ್ಳುಗಳನ್ನು ನನ್ನ ಚರ್ಮದಲ್ಲಿ ತುತು ಮಾಡಲು ಉಪಯೋಗಿಸಿ ದಪ್ಪ ಬಿಳಿದಾರವನ್ನು ತೂತುಗಳ ಮೂಲಕ

ಹಾಯಿಸಿ ಹೊಲಿಗೆ ಹಾಕಿದಳು. ನನ್ನ ಕಾಲುಗಳೆರಡೂ ಮರಗಟ್ಟಿದ್ದವು. ಆದರೆ ಅವುಗಳ ನಡುವಿನ ನೋವು ಅಗಾಧವಾಗಿತ್ತು, ಸತ್ತುಹೋದರೆ ಸಾಕೆನಿಸಿತು. ಅಲ್ಲಿಗೆ ನನ್ನ ಅರಿವು ಮುಗಿಯಿತು.

ನಾನು ಮತ್ತೊಮ್ಮೆ ಕಣ್ಣು ತೆರೆದಾಗ ಜಿಪ್ಸಿ ಹೆಂಗಸು ಹೊರಟು ಹೋಗಿದ್ದಳು. ಹಿಮ್ಮಡಿಯಿಂದ ಸೊಂಟದವರೆಗೆ ನನ್ನ ಕಾಲುಗಳನ್ನು ಬಟ್ಟೆಯಿಂದ ಕಟ್ಟಲಾಗಿತ್ತು! ನಾನು ಹೊರಳಾಡದಿರಲೆಂದು. ನನ್ನನ್ನು ಮಲಗಿಸಿದ್ದ ಬಂಡೆಯೆಡೆ ನೋಡಿದೆ. ಪ್ರಾಣಿ ಬಲಿಕೊಟ್ಟಿರುವರೋ ಏನೋ ಎನ್ನುವಂತೆ ಅದು ರಕ್ತದಿಂದ ತೋಯ್ದು ಹೋಗಿತ್ತು. ನನ್ನ ಚರ್ಮದ ಕತ್ತರಿಸಿದ ತುಣಿಕುಗಳು ಬಿಸಿಲಿನಲ್ಲಿ ಅಲ್ಲಿ ಒಣಗುತ್ತಾ ಬಿದ್ದಿದ್ದವು.

ನನ್ನ ಹಿರಿಯಕ್ಕ ಅಮನ್ ಹಾಗೂ ನನ್ನ ಅಮ್ಮ ನನ್ನನ್ನೆಳೆದು ಪೊದೆಯ ನೆರಳಲ್ಲಿ ಮಲಗಿಸುವವರೆಗೂ ಬಿಸಿಗಾಳಿಯ ಅಲೆ ಮುಖಕ್ಕೆ ಹೊಡೆಯುತ್ತಿತ್ತು. ನಮ್ಮಲ್ಲಿಯ ಪದ್ಧತಿಯಂತೆ ನನಗಾಗಿ ಗಿಡದ ಕೆಳಗೆ ಚಿಕ್ಕ ಗುಡಿಸಲೊಂದನ್ನು ಸಿದ್ಧಪಡಿಸಿದರು. ಮುಂದಿನ ಕೆಲವು ವಾರಗಳವರೆಗೂ ಆ ಗುಡಿಸಲಿನಲ್ಲಿ ಚೇತರಿಸಿಕೊಳ್ಳುವವರೆಗೆ ನಾನೊಬ್ಬಳೇ ವಿಶ್ರಾಂತಿ ಪಡೆಯಬೇಕಿತ್ತು.

ಹಲವಾರು ಗಂಟೆಗಳ ನಂತರ ನನಗೆ ಮೂತ್ರ ಮಾಡಬೇಕೆನಿಸಿತು. ನನ್ನ ಅಕ್ಕನನ್ನು ಕರೆದು ಹೇಳಿದೆ. ಅವಳು ನನ್ನನ್ನು ಪಕ್ಕಕ್ಕೆ ಹೊರಳಿಸಿ, ಉಸುಕಿನಲ್ಲಿ ಒಂದು ಚಿಕ್ಕ ತೆಗ್ಗು ತೋಡಿ ಇದರಲ್ಲಿ ಮಾಡು ಎಂದಳು. ಮೂತ್ರದ ಒಂದು ಹನಿ ಬರುತ್ತಲೇ ಚರ್ಮವೆಲ್ಲಾ ಆಮ್ಲದಿಂದ ಸುಡುತ್ತಿದೆಯೇನೋ ಎನಿಸಿತು. ಜಿಪ್ಸಿ ಹೆಂಗಸು, ಹೊಲಿಗೆ ಹಾಕಿದ ನಂತರ ಮೂತ್ರ ಹಾಗೂ ಋತುಸ್ರಾವ ಹೊರಹೋಗಲು ಕೇವಲ ಒಂದು ಬೆಂಕಿಕಡ್ಡಿಯ ತಲೆಯಷ್ಟು ಗಾತ್ರದ ದ್ವಾರ ಮಾತ್ರ ಬಿಟ್ಟಿದ್ದಳು.

ದಿನಗಳು ಉರುಳಿದಂತೆ, ಗುಡಿಸಿಲಿನಲ್ಲಿ ಮಲಗಿದ ನನಗೆ ಸೋಂಕು ತಗುಲಿ ಕೆಂಡದಂತಹ ಜ್ವರ ಕಾಯತೊಡಗಿತು. ಸ್ಮೃತಿ ಅರೆಸ್ಮೃತಿಗಳ ನಡುವೆ ನಾನಿರುವಾಗ ಅಮ್ಮ ಮನೆಯಿಂದ ಊಟ ನೀರು ತರುತ್ತಿದ್ದಳು.

ಕಾಲುಗಳ ಕಟ್ಟನ್ನಿನ್ನೂ ಬಿಚ್ಚಿರಲಿಲ್ಲ, ಹಾಗೇ ಮಲಗಿರುವಂತೆಯೇ ನಾನು ಭಯ ಆಶ್ಚರ್ಯದಿಂದ ಯಾಕೆ? ಇವೆಲ್ಲಾ ಯಾವುದಕ್ಕಾಗಿ? ಎಂದು ಚಿಂತಿಸಿದೆ. ಆ ಚಿಕ್ಕ ವಯಸ್ಸಿನಲ್ಲಿ ನನಗೆ ಲೈಂಗಿಕ ವಿಷಯದ ಜ್ಞಾನವಿರಲಿಲ್ಲ, ನನಗನಿಸಿದ್ದೆಂದರೆ, ಅಮ್ಮನ ಪರವಾನಿಗೆಯಿಂದ ನಾನು ಈ ಹಿಂಸೆಗೆ ಒಳಗಾಗಿರುವೆನೆಂದು ಮಾತ್ರ.

ಸುನ್ನತಿಯಿಂದ ಅಪಾರ ಯಾತನೆ ಅನುಭವಿಸಿದರೂ ಬದುಕುಳಿದ ಅದೃಷ್ಟವಂತೆ ನಾನು. ಎಷ್ಟೋ ಹುಡುಗಿಯರು ರಕ್ತಸ್ರಾವ, ಆಘಾತ, ಸೋಂಕು ಹಾಗೂ ಧನುರ್ವಾತಗಳಿಂದ ಮರಣವಪ್ಪುತ್ತಾರೆ. ಅನಾಗರಿಕ ಸ್ಥಿತಿಯಲ್ಲಿ ನಡೆಸುವ ಇಂಥ ಕ್ರೂರ ಪದ್ಧತಿಯಿಂದ ನನ್ನಂಥವರು ಬದುಕು ಉಳಿಯುವುದೇ ಆಶ್ಚರ್ಯ.

## ಮದುವೆಯ ಪ್ರಸಂಗ

ನಾನು ಸುಮಾರು ಹದಿಮೂರು ವರ್ಷದವಳಿದ್ದಿರಬಹುದು, ಒಂದು ಸಂಜೆ ಅಪ್ಪ ನನ್ನನ್ನು ಮೃದುವಾಗಿ ಹತ್ತಿರ ಕರೆದು ಮಾತಾಡಿಸಿದ. ಸಾಮಾನ್ಯವಾಗಿ ತುಂಬ ಕಠಿಣವಾಗಿ ವರ್ತಿಸುವ ಆತ ಹೀಗೆ ಕರೆದದ್ದು ನನಗೆ ಸಂಶಯ ಉಂಟು ಮಾಡಿತು. ನನ್ನನ್ನು ತೊಡೆಯ ಮೇಲೆ ಕೂಡಿಸಿಕೊಂಡು, ''ನೋಡು ನೀನು ತುಂಬಾ ಒಳ್ಳೆಯ ಹುಡುಗಿ, ಗಂಡಸಿಗಿಂತಲೂ ಕೆಲಸಗಳನ್ನು ಹೆಚ್ಚು ಸಮರ್ಥವಾಗಿ ಮಾಡುವಿ, ಆಡು ಕುರಿ ಒಂಟೆಗಳ ನಿಗಾ ವಹಿಸುವಿ, ಆದರೆ ಮಗು, ನಿನ್ನನ್ನು ಬಿಟ್ಟಿರುವುದು ನನಗೆ ಬಹಳ ಕಷ್ಟವಾಗುತ್ತದೆ.'' ಅಪ್ಪನ ಮಾತು ಕೇಳಿ, ಆತ ನನ್ನ ಅಕ್ಕನಂತೆ ನಾನೂ ಮನೆಬಿಟ್ಟು ಓಡಿ ಹೋಗುವೆನೆಂದು ಭಾವಿಸಿದ್ದಾನೆಂದು ತಿಳಿದೆ. ನನ್ನ ಅಕ್ಕ ಅಮ್ಮ ಅಪ್ಪ ಏರ್ಪಡಿಸಿದ್ದ ಮದುವೆ ಇಷ್ಟವಿಲ್ಲದೇ ಮನೆಬಿಟ್ಟು ಹೋಗಿದ್ದಳು. ಅಪ್ಪನ ಕುತ್ತಿಗೆಗೆ ಜೋತು ಬಿದ್ದು ''ಓಹ್, ನಾನೂ ಎಲ್ಲಿಗೂ ಹೋಗುವುದಿಲ್ಲ ಅಪ್ಪ.'' ಎಂದೆ. ಅಪ್ಪ ದೂರಸರಿದು ಕುಳಿತು ನನ್ನತ್ತ ದಿಟ್ಟಿಸುತ್ತ

''ಹೌದು, ನೀನು ನನ್ನ ಮುದ್ದು ಮಗಳು ಅದಕ್ಕೇ ನಿನಗಾಗಿ ಗಂಡನೊಬ್ಬನನ್ನು ಹುಡುಕಿರುವೆನು'' ಎಂದ. ''ಇಲ್ಲ ಇಲ್ಲ ನಾನು ಮದುವೆಯೇ ಆಗುವುದಿಲ್ಲ'' ನಾನು ತಲೆ ಅಲುಗಿಸುತ್ತ ಜೋರಾಗಿ ಕೂಗಿದೆ. ಒಂಚೂರೂ ಉದ್ಧಟಳೂ, ಅಂಜಿಕೆಯಿಲ್ಲದವಳೂ ಆಗಿ ಬೆಳೆದ ನಾನು ಈಗ ಮದುವೆಯ ವಿಷಯದಿಂದ ತುಂಬ ಗಾಬರಿಯಾದೆ.

ಮಾರನೆಯ ದಿನ ಹಾಲು ಕರೆಯುತ್ತಿರುವಾಗ ಅಪ್ಪ ನನ್ನನ್ನು ಕರೆದು, 'ಬಾ ಇಲ್ಲಿ ನನ್ನ ಮುದ್ದು ಮಗಳೇ, ಈತ ಶ್ರೀಮಾನ್...' ಆತನ ಮಾತನ್ನು ಪೂರ್ಣ ನಾನು ಕೇಳಿಸಿಕೊಳ್ಳಲೇ ಇಲ್ಲ, ಕೋಲೂರಿಕೊಂಡು ಕುಳಿತ ಉದ್ದನೆಯ ಬಿಳಿಗಡ್ಡದ ಮನುಷ್ಯನೊಬ್ಬ ಕಣ್ಣಿಗೆ ಬಿದ್ದ. ಆತ ಸುಮಾರು ಅರವತ್ತು ವರ್ಷದವನಿರಬಹುದೆನಿಸಿತು. 'ವಾರಿಸ್, ಗಲೂಲ್ ಅವರಿಗೆ ವಂದಿಸು' ಅಪ್ಪನ ಮಾತಿನಂತೆ 'ಹಲೋ' ಎಂದು ತಣ್ಣನೆಯ ಸ್ವರದಲ್ಲಿ ಗುಣುಗುಣಿಸಿದೆ. ಆ ಮುದಿ ಮೂರ್ಖ ಹಲ್ಲು ಕಿರಿಯುತ್ತ ಕೋಲೂರಿಕೊಂಡು ನನ್ನತ್ತಲೇ ದಿಟ್ಟಿಸುತ್ತಿದ್ದ, ಗಾಬರಿಯಿಂದ ಆತನನ್ನೇ ನೋಡುತ್ತಿದ್ದ ನನ್ನ ಮುಖ ನೋಡಿ ಅಪ್ಪ ನಾನು ಏನಾದರೂ ಅಂದುಗಿಂದೇನೆಂದು ಉಪಾಯವಾಗಿ 'ಹೋಗು ನಿನ್ನ ಕೆಲಸ ನೋಡಿಕೋ' ಎಂದ. ಇಷ್ಟೇ ಸಾಕೆನ್ನುವಂತೆ ನಾನು ಮರಳಿ ರೊಪ್ಪವನ್ನು ಹೊಕ್ಕೆ.

ಮಾರನೆಯ ದಿನ ಬೆಳಿಗ್ಗೆ ಅಪ್ಪ ನನ್ನನ್ನ ಕರೆದು, ''ನಿನ್ನೆ ಬಂದಿದ್ದನಲ್ಲ ಆತನೇ ನಿನ್ನ ಭಾವೀ ಗಂಡ, ತಿಳಿಯಿತಾ?'' ಎಂದ. ''ಆದರೆ, ಅಪ್ಪಾ ಆತ ತುಂಬ ವಯಸ್ಸಾದವನು'' ನಾನೆನ್ನುತ್ತಲೆ, ''ಅದೇ ಒಳ್ಳೇದು, ಹೊರಗೆಲ್ಲೂ ಸುತ್ತಾಡಲು ಆಗದ ಕಾರಣ ಆತ ನಿನ್ನನ್ನೆಂದೂ ಬಿಟ್ಟಿರುವುದಿಲ್ಲ . ನಿನ್ನನ್ನು ಚೆನ್ನಾಗಿ ನೋಡಿಕೊಳ್ಳುವನು. ಅಷ್ಟೇ ಅಲ್ಲ, ಅವನು ನನಗೆ ಐದು ಒಂಟೆಗಳನ್ನು ಕೊಡಲು ಒಪ್ಪಿದ್ದಾನೆ'' ಹಲ್ಲುಕಿರಿಯುತ್ತ ಅಪ್ಪ ಹೇಳಿದ.

CPMG/KA/BG-8/2003-05 RNI No. 45577/88

*Posted at Basavanagudi P.O. On every 25th of the Month*

ಇದೇ ಕೊನೆಯ ಬಾರಿಗೇನೋ ಎಂಬಂತೆ, ಆಡುಗಳ ಮಂಡಿಯನ್ನು ನೋಡುತ್ತ ನಾನು ನನ್ನ ಮದುವೆಯನ್ನು ಆ ಮುದುಕನೊಂದಿಗೆ ಕಲ್ಪಿಸಿಕೊಂಡೆ. ಎಲ್ಲ ಕೆಲಸಗಳನ್ನೂ ನಾನೇ ನೋಡಿಕೊಳ್ಳುವುದು, ಆತ ಸುಮ್ಮನೇ ಕೋಲೂರಿಕೊಂಡು ನನ್ನ ಮುಂದೆ ಸುತ್ತಾಡುವುದು, ಆತನೇನಾದರೂ ಹೃದಯಾಘಾತದಿಂದ ಸತ್ತು ಹೋದರೆ, ನಾನೊಬ್ಬಳೇ ನಾಲ್ಕೈದು ಮಕ್ಕಳನ್ನು ಸಾಕುವುದು... ಇಂಥ ಜೀವನ ನನಗೆ ಬೇಕಾಗಿಲ್ಲವೆಂದು ಆಗಲೇ ತೀರ್ಮಾನಿಸಿದೆ.

ಅಂದು ಸಂಜೆ ಎಲ್ಲರೂ ಮಲಗಲು ಹೋದ ನಂತರ, ಇನ್ನೂ ಒಲೆಯ ಮುಂದೆ ಕುಳಿತಿದ್ದ ಅಮ್ಮನ ಹತ್ತಿರ ಹೋಗಿ, ಪಿಸುಮಾತಿನಲ್ಲಿ ಉಸುರಿದೆ, ''ನಾನು ಮನೆ ಬಿಟ್ಟು ಹೋಗುತ್ತಿರುವೆ''.

''ಶ್ಯೂ, ಮೆಲ್ಲಗೆ, ಎಲ್ಲಿ ಹೋಗಬೇಕೆಂದಿರುವೆ?''

''ಮೊಗದಿಶುವಿಗೆ, ಅಕ್ಕನಿರುವಲ್ಲಿ ಹೋದರಾಯಿತೆಂದು ಕೊಂಡಿರುವೆ''

''ಆಯಿತು ಮಲಗು ಹೋಗು'' ಅವಳ ಧ್ವನಿಯಲ್ಲಿಯ ಕಾಠಿಣ್ಯ ಆ ವಿಷಯವನ್ನು ಅಲ್ಲಿಗೆ ಮುಕ್ತಾಯಗೊಳಿಸಲು ಸೂಚಿಸಿತು.

ಆ ರಾತ್ರಿ ನಾನಿನ್ನೂ ನಿದ್ದೆಯಲ್ಲಿರುವಾಗ ಅಮ್ಮ ನನ್ನ ಬಳಿ, ಮೊಳಕಾಲೂರಿ ಕುಳಿತು ಮೆತ್ತಗೆ ನನ್ನನ್ನು ತಟ್ಟಿ ಎಚ್ಚರಿಸಿದಳು. 'ಆತ ಏಳುವುದರಲ್ಲಿ ಹೊರಟು ಹೋಗು' ಎಂದು ಪಿಸುನುಡಿದಳು. ಆಗಲೇ ಮರಳುಗಾಡಿನಗುಂಟ ನನ್ನ ಪಲಾಯನ ಪ್ರಾರಂಭವಾಯಿತು.

ಮನೆ ತ್ಯಜಿಸಿ ಹೋಗುವ ಮುಂಚೆ ಅಮ್ಮ ನನ್ನ ಕತ್ತನ್ನು ಬಳಸಿ ಗಟ್ಟಿಯಾಗಿ ಹಿಡಿದುಕೊಂಡಳು. ಮಬ್ಬು ಗತ್ತಲಿನಲ್ಲಿ ಆಕೆಯ ಮುಖ ನೋಡಲು ಪ್ರಯತ್ನಿಸಿದೆ, ಕಾಣಲಿಲ್ಲ. ಆ ರೂಪು ಕಲ್ಪಿಸಿಕೊಂಡು ಹೆಣಗಿದೆ. ಬಿಟ್ಟು ಹೋಗಲು ಮನಸ್ಸು ಗಟ್ಟಿ ಮಾಡಿಕೊಂಡಿದ್ದರೂ ಆ ಕ್ಷಣ ಕಣ್ಣುಗಳು ತುಂಬಿ ಬಂದು ಅವಳನ್ನು ಗಟ್ಟಿಯಾಗಿ ತಬ್ಬಿಕೊಂಡೆ.

''ನೋಡು, ಎಲ್ಲ ಒಳ್ಳೆಯದಾಗುತ್ತದೆ'' ಅಮ್ಮ ಮುಂದುವರೆಸಿದಳು ''ಆದರೆ ಬಹಳ ಎಚ್ಚರಿಕೆಯಿಂದಿರು, ವಾರಿಸ್ ನನ್ನನ್ನು ದಯವಿಟ್ಟು ಮರೆಯಬೇಡ''

''ಇಲ್ಲ ಅಮ್ಮಾ ಎಂದೂ ಮರೆಯೋಲ್ಲ'' ಎಂದೆ. ಆಕೆಯ ಅಪ್ಪುಗೆಯಿಂದ ಬಿಡಿಸಿಕೊಂಡವಳೇ ಕತ್ತಲಲ್ಲಿ ಓಡಿದೆ.

*(ಶ್ರೀಮತಿ ಭಾರತಿ ಮೋಹನ ಕೋಟಿಯವರ ಮರಳು ಗಾಡಿನ ಕುಸುಮ ಪುಸ್ತಕದಿಂದ ಆಯ್ದ ಲೇಖನ)*

ಮುಂದುವರಿಯುವುದು..........

"Achala" 108, Skyline Surabhi,
14 - P, Vidyapeeta Road,
BSK III Stage,
Bangalore - 560 085

To :

Smt/Sri